# ಶ್ರೀ ಹರ್ಷ

ಜಿ. ಪಿ. ರಾಜರತ್ನಂ



೧೯೩೬

ಸತ್ಯಶೋಧನ ಪ್ರಕಟನ ಮಂದಿರ

ಬೆಂಗಳೂರು

# ಮುನ್ನುಡಿ

ನಮ್ಮ ಹಿಂದೂದೇಶದ ಹಿಂದಿನ ಮಹಾಕಾಲಗಳ ಚಿತ್ರವನ್ನೂ ಆಂದಿನ ಮಹಾಪುರುಷರ ಜೀವನವನ್ನೂ ಜನಸಾಮಾನ್ಯಕ್ಕೆ ಪರಿಚಯ ಮಾಡಿಕೊಡುವ ಉದ್ದೇಶದಿಂದ **'ಚೀನಾದೇಶದ ಬೌದ್ಧಯಾತ್ರಿಕರು', 'ಗೌತಮ ಬುದ್ಧ', 'ಅಶೋಕ ಮೌರ್ಯ'** ಎಂಬ ಪುಸ್ತಕಗಳನ್ನು ಇದುವರೆಗೆ ಪ್ರಕಟಿಸಿದುದಾಗಿದೆ. ಹೀಗೆ ಇನ್ನೂ ಬರೆಯ ಬಯಸಿ, ಇದುವರೆಗೆ ಪ್ರಕಟಿಸಿರುವ ಪುಸ್ತಕಗಳಲ್ಲಿ ಈ **'ಶ್ರೀಹರ್ಷ'**ವು ನಾಲ್ಕನೆಯದು.

ಈ ಪುಸ್ತಕವನ್ನು ಬರೆಯುವುದಕ್ಕಾಗಿ ಬಳಸಿದ 'ಸಾಧನಸಾಹಿತ್ಯ'ವನ್ನು ಕೆಳಗೆ ಕಾಣಿಸಿದ್ದೇನೆ:

Harsha —*Bana*
Buddhist Records of The Western World 2 vols —*Beal*
Life of Hiuen-Tsiang —*Beal*
On Yuan Chwang— 2 vols. —*Watters*
Harsha —*Mookerji*
Sri Harsha of Kanouj —*Panikkar*
Men and Thought in Ancient India —*Mookerji*
In the Footsteps of the Buddha —*Rene Grousset*

ನನ್ನ ಇತರ ಪುಸ್ತಕಗಳಂತೆ ಇದನ್ನೂ ಸಹೃದಯರ ಮಡಿಲಿನಲ್ಲಿ ಹಾಕಿದ್ದೇನೆ. ಇದು ನಮ್ಮ ಕನ್ನಡ ನಾಡಿನ ಹೆಂಗಸರು ಮಕ್ಕಳ ಕೈಲಿ ಬೆಳೆಯಲೆಂದು ಹಾರೈಸುತ್ತೇನೆ.

ಮಲ್ಲೇಶ್ವರಂ
ಬೆಂಗಳೂರು

**ಜಿ. ಪಿ. ರಾಜರತ್ನಂ**

ನಿಜಪಕ್ಷಾರ್ಹಿತಸ್ನೇಹಾಃ ಬಹುಭಕ್ತಜನಾಶ್ರಿತಾಃ |
ಸುಕಾಲಾ ಇವ ಜಾಯನ್ತೇ ಪ್ರಜಾಪುಣ್ಯೇನ ಭೂಭುಜಃ ||

ಹರ್ಷಚರಿತ—ತೃತೀಯ ಉಚ್ಛ್ವಾಸ

ಯೋಗಂ ಸ್ಪೃಷ್ಟೇಽಪಿ ನೇಚ್ಛನ್ತಿ ಕುರ್ವತೇ ನ ಕರಗ್ರಹಮ್ |
ಮಹಾನ್ತೋ ನಾಮಮಾತ್ರೇಣ ಭವನ್ತಿ ಪತಯೋ ಭುವಃ ||
ಸಕಲ ಮಹೀಭೃತ್ಕಮ್ಪಕೃದುತ್ಪದ್ಯತ ಏಕ ಏವ ನೃಪವಂಶೇ |
ವಿಪುಲೇಽಪಿ ಪೃಥುಪ್ರತಿಮೋ ದನ್ತ ಇವ ಗಣಾಧಿಪಸ್ಯ ಮುಖೇ ||

ಹರ್ಷಚರಿತ—ಚತುರ್ಥ ಉಚ್ಛ್ವಾಸ

ಜಯತಿ ಜ್ವಲತ್ಪ್ರತಾಪಜ್ವಲನಪ್ರಾಕಾರಕೃತ ಜಗದ್ರಕ್ಷಃ |
ಸಕಲ ಪ್ರಣಯಿಮನೋರಥಸಿದ್ಧಿ ಶ್ರೀಪರ್ವತೋ ಹರ್ಷಃ ||

ಹರ್ಷಚರಿತ—ಪ್ರಥಮ ಉಚ್ಛ್ವಾಸ

# ವಿವರ

ಶ್ರೀ ಹರ್ಷ

ಬನ್ಸ್ಖೇರಾ ದಾನಶಾಸನದಲ್ಲಿ
ಕಂಡುಬರುವ ಹರ್ಷನ ಹೆಸರು :

'ಸ್ವಹಸ್ತೋ ಮಮ ಮಹಾರಾಜಾಧಿರಾಜ ಶ್ರೀ ಹರ್ಷಸ್ಯ'

# ಶ್ರೀ ಹರ್ಷ

## ವಿಜಯಲಕ್ಷ್ಮಿಯ ವರಪ್ರದಾನ

### ಶಿವಭಕ್ತ ಪುಷ್ಪಭೂತಿ

ಇದು ಬಲು ಹಿಂದಿನ ಕತೆ.

ಶ್ರೀಕಂಠ ಎಂಬುದೊಂದು ನಾಡು. ಅದರಲ್ಲಿ ಸ್ಥಾಣ್ವೀಶ್ವರವೆಂಬುದೊಂದು ಪ್ರಾಂತ್ಯ. ಆ ಪ್ರಾಂತ್ಯವನ್ನು ಆಳುತ್ತಿದ್ದ ಅರಸನಿಗೆ ಪುಷ್ಪಭೂತಿಯೆಂದು ಹೆಸರು. ಅವನು ಸಕಲ ಸದ್ಗುಣಗಳಿಂದ ಕೂಡಿದ ಮಹಾನುಭಾವ.

ಪುಷ್ಪಭೂತಿಗೆ ತನ್ನ ಜನನ ಮೊದಲುಗೊಂಡು ಲೋಕನಾಥನಾದ ಪರಮೇಶ್ವರನ ಮೇಲೆ ಅತಿ ಭಕ್ತಿ. ಅವನು ಶಿವನ ಹೊರತು ಬೇರೆ ದೇವರ ಕಡೆ ನೋಡುತ್ತಿರಲಿಲ್ಲ. ಶಂಕರನನ್ನು ಆರಾಧಿಸದೆ ಅರಸನು ಕನಸಿನಲ್ಲಿಯೂ ಊಟಮಾಡುತ್ತಿರಲಿಲ್ಲ. ಪ್ರಜೆಗಳೆಲ್ಲ ಅರಸನನ್ನು ಅನುಕರಿಸಿ ಪರಮೇಶ್ವರನ ಪೂಜೆಯಲ್ಲಿ ಸದಾ ನಿರತರಾಗಿದ್ದರು.

ಹೀಗೆ ಜನಪದಕ್ಕೆ ಜನಪದವೇ ಪೂಜಿಸಿ, ಶಿವನೇ ಸರ್ವಸ್ವವೆಂದಿದ್ದ ನಾಡಿನಲ್ಲಿ ಭೈರವಾಚಾರ್ಯನೆಂಬ ಶೈವ ಸಂನ್ಯಾಸಿಯಿದ್ದನು. ಆತನು ದಕ್ಷಿಣದ ಕಡೆಯವನು. ಆತನು ಸಕಲ ವಿದ್ಯೆಗಳನ್ನೂ ಕಲಿತು, ಎರಡನೆಯ ಸಾಕ್ಷಾಚ್ಛಿವನೆಂದು ಜನರಲ್ಲಿ ಹೆಸರು ಪಡೆದಿದ್ದನು. ಇಂತಹ ಶೈವ ಶ್ರೇಷ್ಠನಾದ ಭೈರವಾಚಾರ್ಯನ ಯಶಸ್ಸು ಅವನಂತೆಯೇ ಶಿವನಿಗೆ ಮನಸೋತ ಪುಷ್ಪಭೂತಿಯ ಕಿವಿಗೆ ಬಿತ್ತು. ಭೈರವಾಚಾರ್ಯನ ಪರಿಚಯವಿಲ್ಲದಿದ್ದರೂ ಅರಸನಿಗೆ ಅವನಲ್ಲಿ ವಿಶೇಷವಾದ ಭಕ್ತಿ ಜನಿಸಿತು. ಭೈರವಾಚಾರ್ಯನು ಎರಡನೆಯ ಭೈರವನೇ ಎಂದು ಅವನು ಭಾವಿಸಿದನು.

ಅಂದಿನಿಂದ, ಎಂದಾದರೂ ಹೇಗಾದರೂ ಭೈರವಾಚಾರ್ಯನನ್ನು ತಾನು ದರ್ಶಿಸಿಯೇ ತೀರಬೇಕೆಂದು ದೊರೆ ಆತುರನಾಗಿದ್ದನು.

ಒಂದು ದಿನ ಸಂಜೆ, ಬೆಳಕು ಮುಳುಗುತ್ತಿರುವಾಗ, ದೊರೆ ಅಂತಃ ಪುರದಲ್ಲಿದ್ದನು. ಆಗ, ಭೈರವಾಚಾರ್ಯನ ಕಡೆಯ ಸಂನ್ಯಾಸಿಯೊಬ್ಬನು ಬಂದಿರುವನೆಂದು ಪ್ರತೀಹಾರಿ ತಿಳಿಸಿದಳು. ಅದು ಕೇಳಿ, ದೊರೆ ಗಂಭೀರವಾಗಿ ಮೇಲೆದ್ದು ಮಾತಿನಲ್ಲಿ ಗೌರವವನ್ನು ಹರಿಸುತ್ತ "ಎಲ್ಲಿ? ಕರೆದು ತಾ!" ಎಂದ. ಶಂಕರನ ಪ್ರಮಥರಲ್ಲೊಬ್ಬನು ಭೂಮಿಗಿಳಿದು ಬಂದಂತೆ ಭ್ರಮೆಯನ್ನುಂಟುಮಾಡುತ್ತಿದ್ದ ಭೈರವಾಚಾರ್ಯನ ಬಳಗದವ ನೊಬ್ಬ ಪ್ರತೀಹಾರಿಯೊಡನೆ ಒಳಗೆ ಬಂದ. ದೊರೆ ಅವನನ್ನು ಉಪ ಚರಿಸಿ ಕರೆತಂದು, ಅವನು ಕುಳಿತಮೇಲೆ ಭೈರವಾಚಾರ್ಯನ ಕುಶಲವನ್ನು ಕೇಳಿದನು.

ಸಂನ್ಯಾಸಿ ತನ್ನ ಗುರುವಿನ ಕುಶಲವನ್ನು ದೊರೆಗೆ ತಿಳಿಸಿ "ಅರಸ! ಆಚಾರ್ಯರು ಸರಸ್ವತೀ ನದಿಯ ತೀರದ ವನದಲ್ಲಿರುವರು. ನಿನಗೆ ತಮ್ಮ ಆಶೀರ್ವಾದವನ್ನು ಕಳುಹಿಸಿರುವರು" ಎಂದು ಹೇಳಿ, ಮಣಿಗಳು ಮೆಟ್ಟಿದ ಐದು ಕಮಲಗಳನ್ನು ತನ್ನ ಚೀಲದಿಂದ ತೆಗೆದು ದೊರೆಗೆ ಕೊಟ್ಟನು.

ದೊರೆ ಅದನ್ನು ತಕ್ಕ ರೀತಿಯಲ್ಲಿ ಸ್ವೀಕರಿಸಿ "ನಾವು ಶಿವನಿಗೆ ಸಲಿ ಸುವ ಸೇವೆಯಿಂದ, ನಮ್ಮ ಆಸೆಗೂ ಮೀರಿದ ಫಲಗಳು ನಮಗೆ ಲಭಿಸು ತ್ತಿವೆ. ಇಂದು ಭೈರವಾಚಾರ್ಯರ ಕೃಪೆಗೆ ನಾವು ಪಾತ್ರರಾದುದೇ ಇದಕ್ಕೆ ಸಾಕ್ಷಿ. ನಾಳೆ ನಾವೇ ಬಂದು ಆಚಾರ್ಯರನ್ನು ದರ್ಶಿಸುವೆವು" ಎಂದು ಹೇಳಿ ಆ ಸಂನ್ಯಾಸಿಯನ್ನು ಕಳುಹಿಸಿ ಸಂತೋಷದಿಂದಿದ್ದನು.

## ಭೈರವಾಚಾರ್ಯನ ದರ್ಶನ

ಮರುದಿನ ಬೆಳಿಗ್ಗೆ ಪುಷ್ಪಭೂತಿ ಬೇಗನೆ ಎದ್ದನು. ಕುದುರೆ ಹತ್ತಿ, ಛತ್ರ ಚಾಮರ ಹಿಡಿದವರೊಡನೆ ಭೈರವಾಚಾರ್ಯನ ದರ್ಶನಕ್ಕೆ ಹೊರಟನು. ಸೂರ್ಯನ ದರ್ಶನಕ್ಕೆ ಚಂದ್ರ ಹೊರಡುವಂತೆ ಸಂಭ್ರಮ ದಿಂದ ಹೊರಟನು. ಭೈರವಾಚಾರ್ಯನಿದ್ದ ಸ್ಥಳಕ್ಕೆ ಬರುವ ವೇಳೆಗೆ ಅವನ

ಶಿಷ್ಯನೊಬ್ಬನು ದೊರೆಯೆದುರಿಗೆ ಬಂದನು. "ಆಚಾರ್ಯರೆಲ್ಲಿ?" ಎಂದು ದೊರೆ ಕೇಳಿದ ಪ್ರಶ್ನೆಗೆ "ಅವರು ಆ ಮಾತೃಗೃಹ ದೇವಾಲಯದ ಉತ್ತರ ದಲ್ಲಿರುವ ಬಿಲ್ವವಟಿಯಲ್ಲಿರುವರು" ಎಂದು ಅವನು ನುಡಿದನು. ದೊರೆ ಅಲ್ಲಿಗೆ ತೆರಳಿದನು.

ಬಿಲ್ವವಟಿಯಲ್ಲಿ ಭೈರವಾಚಾರ್ಯನು ಅನೇಕ ಶಿಷ್ಯರ ನಡುವೆ ಕುಳಿತಿದ್ದನು. ದೊರೆಯನ್ನು ಕಂಡುದು ತಡ, ಚಂದ್ರನು ಬಂದುದಕ್ಕೆ ಉಕ್ಕೇರುವ ಸಮುದ್ರದಂತೆ, ಆ ಸಭೆ ಮೇಲೆದ್ದಿತು. ಭೈರವಾಚಾರ್ಯನು ತಾನೇ ಮುಂದೆ ಬಂದು ಅರಸನನ್ನು ಆದರಿಸಿ, ಒಂದು ಬಿಲ್ವಫಲವನ್ನು ನೀಡಿ, ಗಂಭೀರ ಘೋಷದಿಂದ ಆಶೀರ್ವಾದ ಮಾಡಿದನು.

ಸಂತೋಷದಿಂದ ಅರಳಿದ ಕಣ್ಣಿನ ಅರಸನು ಆಚಾರ್ಯನಿಗೆ ದೂರ ದಿಂದ ನಮಿಸಿದನು. ಆಚಾರ್ಯನು ತನ್ನ ಹುಲಿಚರ್ಮದ ಮೇಲೆ ಕುಳ್ಳಿರು ಬಾ ಎಂದು ಕರೆದುದಕ್ಕೆ ಸಂಕೋಚಭಕ್ತಿಗಳಿಂದ ಒಪ್ಪದೆ, ಅವನ ಬಳಿಯಲ್ಲಿಯೇ ಒಂದು ನೀಚಾಸನದ ಮೇಲೆ ಕುಳಿತನು.

ದೊರೆಯ ವಿನಯವನ್ನು ಕಂಡು ಭೈರವಾಚಾರ್ಯನು ಅವನಿಗೆ ಮನಸೋತನು. ಇಬ್ಬರೂ ಒಬ್ಬರ ನಡತೆಯನ್ನೊಬ್ಬರು ಮೆಚ್ಚಿದರು. ಹೀಗೆ ಭೈರವಾಚಾರ್ಯನ ಬಳಿಯಲ್ಲಿ ಸ್ವಲ್ಪ ಕಾಲ ಮಾತನಾಡುತ್ತಿದ್ದು, ಪುಷ್ಪಭೂತಿಯು ಆತನ ಅಪ್ಪಣೆ ಪಡೆದು ಅರಮನೆಗೆ ಹಿಂದಿರುಗಿದನು.

ಇನ್ನೊಂದು ದಿನ ಭೈರವಾಚಾರ್ಯನು ತಾನೇ ಅರಮನೆಗೆ ಹೋಗಿ ದೊರೆಯನ್ನು ಕಂಡು ಬಂದನು. ಅರಸನಿಗೆ ಅಂದು ಐದು ಬೆಳ್ಳಿಯ ಕಮಲಗಳನ್ನು ಕೊಟ್ಟ ಭೈರವಾಚಾರ್ಯನ ಶಿಷ್ಯನು ಕೂಡ ಆಗಾಗ್ಗೆ ದೊರೆಯ ಬಳಿ ಬರುತ್ತಿದ್ದ. ಬಂದಾಗಲೆಲ್ಲ ಅಂದಿನಂತೆಯೇ ಐದು ಮಣಿಖಚಿತವಾದ ಬೆಳ್ಳಿಯ ಕಮಲಗಳನ್ನು ಒಪ್ಪಿಸುತ್ತಿದ್ದ.

## ಅಟ್ಟಹಾಸ

ಹೀಗೆ ಕೆಲವು ಕಾಲ ಕಳೆಯಿತು. ಒಂದು ದಿನ ಆ ಶಿಷ್ಯನು ಬಿಳಿಯ ಚಿಂದಿಯಲ್ಲಿ ಏನನ್ನೋ ಮುಚ್ಚಿಕೊಂಡು ಬಂದನು. ಬಂದು, ದೊರೆಯ ಬಳಿ ಕುಳಿತು "ಮಹಾರಾಜ, ನೀನು ಭಾಗ್ಯಶಾಲಿ. ಭೈರವಾಚಾರ್ಯರಿಗೆ

ಪಾತಾಳಸ್ವಾಮಿ ಎಂಬ ಬ್ರಾಹ್ಮಣ ಶಿಷ್ಯನಿದ್ದಾನೆ. ಅವನು ಒಂದು ಬ್ರಹ್ಮ ರಾಕ್ಷಸನಿಂದ ಅಟ್ಟಹಾಸ ಎಂಬ ಕತ್ತಿಯನ್ನು ಪಡೆದನು. ಆ ಕತ್ತಿಗೆ ವೀರವರನಾದ ನೀನೇ ತಕ್ಕ ಪಾತ್ರನೆಂದು ಭೈರವಾಚಾರ್ಯರು ನಿನಗೆ ಅದನ್ನು ಕಳುಹಿಸಿರುವರು'' ಎಂದನು.

ಆತನು ತಾನು ತಂದ ಬಿಳಿಯ ಚಿಂದಿಯಿಂದ ಎಳೆದು ನೀಡಿದ ಅಟ್ಟಹಾಸವನ್ನು ದೊರೆ ನೋಡಿದನು. ಅಮಾವಾಸ್ಯೆಯ ಕತ್ತಲೆಯಂತೆ ಕಪ್ಪಗಿದ್ದರೂ, ಆ ಕತ್ತಿ ಮಿರುಮಿರನೆ ಮಿರುಗುತ್ತಿತ್ತು. ಅದನ್ನು ಕಂಡು ದೊರೆಯ ಮೈ ಉತ್ಸಾಹದಿಂದ ಜುಮ್ಮೆಂದಿತು. ಕೈ ಚಾಚಿ ಅಟ್ಟಹಾಸ ವನ್ನು ತನ್ನ ವಜ್ರಮುಷ್ಟಿಯಿಂದ ಹಿಡಿದನು. ಆ ಕತ್ತಿಯ ಹಿಡಿ ತನ್ನ ಮುಷ್ಟಿಯಲ್ಲಿ ಅಡಗಿದ ರೀತಿಯಲ್ಲಿಯೇ ಅದೇ ಕತ್ತಿಯ ಸಹಾಯದಿಂದ ಸಮಸ್ತ ಪೃಥ್ವಿಯೂ ತನ್ನ ಅಂಗೈಯಲ್ಲಿ ಅಡಗುವುದೆಂದು ದೊರೆಗೆನಿಸಿತು

## ಭೈರವಾಚಾರ್ಯನ ಬಯಕೆ

ಇದಾದ ಕೆಲವು ದಿನಗಳ ಮೇಲೆ ಭೈರವಾಚಾರ್ಯನು ಒಂದುದಿನ ಅರಮನೆಗೆ ಬಂದು ದೊರೆಯೊಡನೆ ಏಕಾಂತದಲ್ಲಿ ಹೀಗೆಂದನು : ''ಮಹಾರಾಜ ! ನಿನ್ನಂತಹ ಮಹಾನುಭಾವರು ಯಾವಾಗಲೂ ಸ್ವಾರ್ಥ ವನ್ನು ಲಕ್ಷಿಸದೆ ಇತರರ ಸೇವೆಗೆ ನೆರವಾಗತಕ್ಕವರು. ನಿನ್ನಂತಹವರಿಗೆ ಬೇಡುವವರನ್ನು ಕಾಣುವುದೇ ಹಬ್ಬ. ಬೇಡಬೇಕಾದವರೆಲ್ಲ ನಿನ್ನೆಡೆಗೇ ಬರುತ್ತಾರೆ. ನಾನು ಕೂಡ ಅದಕ್ಕಾಗಿಯೇ ಬಂದಿದ್ದೇನೆ. ಕೇಳು, ಮಹಾರಾಜ! ಕಲ್ಪದಲ್ಲಿ ಹೇಳಿರುವಂತೆ ಕರಿಯ ಹೂಮಾಲೆ, ಕಪ್ಪು ವಸ್ತ್ರ, ಕಪ್ಪು ಲೇಪನಗಳನ್ನು ಉಪಯೋಗಿಸಿ, ಒಂದು ಕೋಟಿ ಮಂತ್ರ ಗಳನ್ನು ಜಪಿಸಿ ಮಹಾಕಾಳಹೃದಯವೆಂಬ ಮಂತ್ರವನ್ನು ನಡೆಸಿದ್ದೇನೆ. ಒಂದು ಭೇತಾಳವನ್ನು ಸಾಧಿಸಿದರೆ ಅದು ಸಿದ್ಧಿಯಾಗುವುದು. ಆದರೆ ಜೊತೆಗೆ ಯಾರೂ ಇಲ್ಲದೆ ಭೇತಾಳವನ್ನು ಸಾಧಿಸಲಾಗದು. ಇದನ್ನು ನಡೆಸಿಕೊಡಲು ನೀನೇ ಸಮರ್ಥ. ಈ ಕಾರ್ಯಕ್ಕೆ ನೀನು ಒಪ್ಪಿದರೆ ನಿನ್ನ ಸಹಾಯಕ್ಕೆ ಬೇರೆ ಮೂರು ಮಂದಿಯಿರುವರು. ಅವರಲ್ಲಿ ಒಬ್ಬನು ನನ್ನ ಬಾಲ್ಯ ಸ್ನೇಹಿತ, ನಿನ್ನ ಬಳಿಗೆ ಈ ಮೊದಲು ಬಂದು ಹೋಗುತ್ತಿರುವ

ನನ್ನ ಶಿಷ್ಯ; ಅವನ ಹೆಸರು ಟೀಟಿಭ. ಎರಡನೆಯವನು ಪಾತಾಳಸ್ವಾಮಿ; ನಿನ್ನ ಅಟ್ಟಹಾಸವನ್ನು ಬ್ರಹ್ಮರಾಕ್ಷಸನಿಂದ ಪಡೆದವನು. ಮೂರನೆಯವನು ಕೂಡ ನನ್ನ ಶಿಷ್ಯನೇ; ಅವನ ಹೆಸರು ಕರ್ಣತಾಲ. ನೀನು ಇದಕ್ಕೆ ಸಮ್ಮತಿಸಿದರೆ, ರಾಜ, ಅಟ್ಟಹಾಸವನ್ನು ಹಿಡಿದು ಹೊರಡು."

ಭೈರವಾಚಾರ್ಯನ ಹೆಸರು ಕೇಳಿದಂದಿನಿಂದ, ಆತನ ಆಶೀರ್ವಾದಕ್ಕೆ ಪಾತ್ರನಾದಂದಿನಿಂದ, ಅವನ ಸೇವೆಯನ್ನು ಮಾಡುವುದು ಹೇಗೆ, ಅವನ ವಿಶ್ವಾಸಕ್ಕೆ ತನ್ನ ಕೃತಜ್ಞತೆಯನ್ನು ತೋರಿಸುವುದು ಹೇಗೆ ಎಂಬುದೇ ಅರಸನಿಗೆ ಯೋಚನೆಯಾಗಿತ್ತು. ಹೀಗಿರುವಾಗ ತಾನಾಗಿಯೇ ಬಂದ ಭೈರವಾಚಾರ್ಯನ ಪ್ರಾರ್ಥನೆಯನ್ನು ಕೇಳಿ ದೊರೆಯ ಹಿಗ್ಗು ಹೇಳತೀರದು. ತಾನು ಋಣಮುಕ್ತನಾಗುವ ಸಂದರ್ಭ ಸಿಕ್ಕಿದುದಕ್ಕಾಗಿ ಸಂತೋಷಪಡುತ್ತ, ಭೈರವಾಚಾರ್ಯನಿಗೆ ಕೈ ಮುಗಿದು "ಗುರುವೆ! ತಮ್ಮ ಈ ಸೇವೆಯಲ್ಲಿ ತಮ್ಮ ಶಿಷ್ಯರೊಡನೆ ಭಾಗಿಯಾಗುವುದು ನನ್ನ ಭಾಗ್ಯವಿಶೇಷ" ಎಂದು ತನ್ನ ಸಮ್ಮತಿಯನ್ನು ತಿಳಿಸಿದನು. ಅರಸನ ಉತ್ತರದಿಂದ ತೃಪ್ತನಾಗಿ, ಭೈರವಾಚಾರ್ಯನು "ಹಾಗಾದರೆ, ಮಹಾರಾಜ, ಮುಂದಿನ ಕರಿದಿಂಗಳ ಹದಿನಾಲ್ಕನೆಯ ರಾತ್ರಿ ಅಟ್ಟಹಾಸ ಸಮೇತನಾಗಿ ಮಹಾಶ್ಮಶಾನದ ಬಳಿಯ ಪಾಳು ಮನೆಗೆ ಬಾ" ಎಂದು ನುಡಿದು ಹೊರಟನು.

## ಭೇತಾಳ ಸಾಧನೆ

ದಿನ ದಿನ ಕಳೆಯಿತು. ಹದಿನಾಲ್ಕನೆಯ ರಾತ್ರಿ ಬಂತು. ಅಂದು ಅರಸನು ಉಪವಾಸವನ್ನು ಆಚರಿಸಿದನು. ಅಟ್ಟಹಾಸವನ್ನು ಹೂ ಗಂಧಗಳಿಂದ ಆರಾಧಿಸಿದನು. ಹಗಲು ಮುಗಿದು, ಸಂಜೆ ಕಳೆದು, ರಾತ್ರೆ ಬೆಳೆದು ಸಮರಾತ್ರಿಯ ಸಮಯವಾಯಿತು. ಆಗ ಅರಸನು ಅರಮನೆ ಅಂತಃಪುರಗಳಿಗೆ ತಿಳಿಯಗೊಡದಂತೆ ಮಹಾಶ್ಮಶಾನವನ್ನು ಕುರಿತು ನಡೆದನು. ಅರಸನ ಬಲಗೈಯಲ್ಲಿ ಬರಿಮೈಯ ಅಟ್ಟಹಾಸ, ಎಡಗೈಯಲ್ಲಿ ಕಿರುಗತ್ತಿ. ಅಟ್ಟಹಾಸದ ಕರಿಯಕಾಂತಿ ಮೇಲೆ ಬಿದ್ದು, ಅರಸನು ಪತ್ತೆಯಾಗದಿರಲು ನೀಲಿವಸ್ತ್ರ ಧರಿಸಿದಂತೆ ಇತ್ತು.

ಹೀಗೆ ಹೊರಟ ಅರಸನ ಜೊತೆಗೆ ದಾರಿಯಲ್ಲಿ ಟೀಟಿಭ, ಪಾತಾಳ ಸ್ವಾಮಿ, ಕರ್ಣತಾಲರು ಸೇರಿದರು. ಅವರು ಕೂಡ ಖಡ್ಗ ಕಿರುಗತ್ತಿ ಗಳನ್ನು ತಾಳಿ ಆಯುಧ ಸಮೇತರಾಗಿ ಬಂದಿದ್ದರು. ನಾಲ್ವರೂ ಒಂದಾಗಿ ಸಾಗಿ ಮಹಾಶ್ಮಶಾನಕ್ಕೆ ಬಂದರು.

ಆ ಶ್ಮಶಾನ ಸದ್ದಿಲ್ಲದೆ ಮೌನವಾಗಿ ಗಂಭೀರವಾಗಿತ್ತು, ಭೀಷಣ ವಾಗಿತ್ತು. ಗುಗ್ಗುಳದ ಹೊಗೆ ಸುತ್ತ ಹರಡಿತ್ತು. ಅಲ್ಲಿ, ಸಾಧನಭೂಮಿ ಯಲ್ಲಿ, ಬೂದಿಯಿಂದ ಬರೆದ ದೊಡ್ಡ ಮಂಡಲದ ಮಧ್ಯೆ ಭೈರವಾಚಾರ್ಯ ನಿದ್ದನು. ಅಲ್ಲಿ, ಬೆನ್ನು ಕೆಳಗಾಗಿ ಬಿದ್ದಿದ್ದ ಒಂದು ಹೆಣಕ್ಕೆ ಕೆಂಪು ಚಂದನ ಬಳಿದು, ಕೆಂಪು ವಸ್ತ್ರಾಭರಣಗಳನ್ನು ತೊಡಿಸಿ, ಕೆಂಪು ಹೂ ಗಳಿಂದ ಅಲಂಕರಿಸಿದ್ದರು. ಭೈರವಾಚಾರ್ಯನು ಕಪ್ಪು ವಸ್ತ್ರವುಟ್ಟು, ಕಪ್ಪು ಶಿರೋವೇಷ್ಟವನ್ನು ಕಟ್ಟಿ, ಕರಿಯ ಲೇಪನಗಳನ್ನು ಬಳಿದು ಕೊಂಡು ಆ ಹೆಣದ ಎದೆಯ ಮೇಲೆ ಕುಳಿತಿದ್ದನು ಹಾಗೆ ಕುಳಿತು ಆ ಹೆಣದ ಬಾಯಲ್ಲಿ ಉರಿಯುತ್ತಿದ್ದ ಬೆಂಕಿಯಲ್ಲಿ ಕಪ್ಪು ಎಳ್ಳು ಚೆಲ್ಲುತ್ತ ಅಗ್ನಿಕಾರ್ಯವನ್ನು ಆರಂಭಿಸಿದನು. ಮಂತ್ರ ಜಪಿಸುತ್ತ ಅಗ್ನಿಕಾರ್ಯ ಮಾಡುವ ಅವನ ಮೈಯಿಂದ ಹೊರಟ ಬೆವರಿನ ಹನಿಗಳಲ್ಲಿ ಸುತ್ತಿನ ಬೆಳಕುಗಳು ಪ್ರತಿಬಿಂಬಿಸಿ, ತಾನು ಶುದ್ಧನಾಗುವುದಕ್ಕಾಗಿ ಉರಿಯು ತ್ತಿರುವನೋ ಎಂಬಂತಿತ್ತು.

ಹೀಗೆ ಅಗ್ನಿಕಾರ್ಯ ಮಾಡುತ್ತ ಕುಳಿತಿದ್ದ ಆಚಾರ್ಯನಿಗೆ ಬಂದವರು ನಾಲ್ವರೂ ನಮಿಸಿ, ಅವನ ಅಗ್ನಿಕಾರ್ಯದ ರಕ್ಷಣೆಗಾಗಿ ನಾಲ್ಕು ದಿಕ್ಕಿ ನಲ್ಲಿಯೂ ನಿಂತರು. ಪಾತಾಳಸ್ವಾಮಿಯು ಪೂರ್ವವನ್ನೂ ಟೀಟಿಭನು ಪಶ್ಚಿಮವನ್ನೂ ನೋಡಿಕೊಂಡರು. ಕರ್ಣತಾಲನು ಉತ್ತರದಿಕ್ಕಿನಲ್ಲಿ ನಿಲ್ಲಲು, ಪುಷ್ಪಭೂತಿಯು ದಕ್ಷಿಣ ದಿಕ್ಕಿನಲ್ಲಿ ನಿಂತನು. ಹೀಗೆ ನಿಂತ ನಾಲ್ವರ ಭುಜಪಂಜರದ ನಡುವೆ ಭೈರವಾಚಾರ್ಯನು ಭಯವನ್ನು ತೊರೆದು ತನ್ನ ಮಹಾಕಾಳಹೃದಯ ಮಂತ್ರವನ್ನು ಮುಂದುವರಿಸಿದನು.

ಭೈರವಾಚಾರ್ಯನ ಕಾರ್ಯವನ್ನು ಕೆಡಿಸಬೇಕೆಂದು ಅನೇಕ ಭೂತ ಭೇತಾಳಗಳು ಬಂದುವು. ಆದರೆ ನಾಕ್ಕು ದಿಕ್ಕಿನ ಕಾವಲಿಗೆ ನಿಂತ ಆ

ನಾಲ್ವರ ಮುಂದೆ ಅವುಗಳ ಆಟ ನಾಗಲಿಲ್ಲ. ಅವುಗಳ ಕುಣಿತ ಕೂಗಾಟ ಗಳು ಕೊನೆಯಾಗುವ ವೇಳೆಗೆ ಮಧ್ಯರಾತ್ರಿಯಾಯಿತು. ಆಗ ಆ ಸಾಧನ ಭೂಮಿಗೆ ಸ್ವಲ್ಪ ದೂರದಲ್ಲಿ, ಉತ್ತರದಿಕ್ಕಿನ ಕಡೆ, ಭೂಮಿ ಬಿರಿಯಿತು. ಆ ಬಿರುಕಿನಿಂದ ಒಂದು ಘೋರಾಕಾರ ಮೇಲೆದ್ದಿತು. ಅದರ ಮೈಬಣ್ಣ ನೀಲ. ನಡುವಿನ ಸುತ್ತ ಬಿಗಿದ ವೀರಗಚ್ಚೆ ಮಾತ್ರ ಬಿಳಿದು. ಭುಜ ದಪ್ಪನಾಗಿ ಅಮುಕಿದ ಹಾಗಿತ್ತು. ತಲೆಯ ಉಂಗುರಗೂದಲಿಗೆ ಹಬ್ಬಿ ಕೊಂಡಿತ್ತು ಮಾಲತೀ ಮಾಲೆ. ಮೈಯೆಲ್ಲ ಚಂದನಮಯ. ಕೊರಳಿ ಗೊಂದು ಹಾರ. ಕಣ್ಣಿನ ಕೆಂಪು ರಕ್ತಗೆಂಪು. ದನಿ ಗುಡುಗುದನಿ. ಆ ಆಕಾರ ಹೆಜ್ಜೆಯಿಟ್ಟಾಗಲೆಲ್ಲ ಭೂಮಿ ಅದುರುತ್ತಿತ್ತು.

ಆ ಆಕಾರ ಕೈಲಿದ್ದ ಕೆಮ್ಮಣ್ಣನ್ನು ಭುಜಕ್ಕೆ ಬಳಿದುಕೊಳ್ಳುತ್ತ ಮುಂದೆ ಬಂತು. ಮಲ್ಲರ ರೀತಿಯಲ್ಲಿ ಹೆಜ್ಜೆಯಿಡುತ್ತ, ಆಗಾಗ್ಗೆ ಭುಜ ವನ್ನು ಅಪ್ಪಳಿಸಿ ತಟ್ಟುತ್ತ ಮುಂದೆ ಬಂತು. ಬಂದು, ಭೈರವಾಚಾರ್ಯ ನನ್ನೂ ಅವನ ಸಹಾಯಕ್ಕೆ ನಿಂತ ನಾಲ್ವರನ್ನೂ ತಿರಸ್ಕಾರದಿಂದ ನೋಡಿ "ಹಾ ಹಾ! ವಿದ್ಯಾಧರಿಯರು ಮೆಚ್ಚುವ ವಿದ್ಯಾಧರನಾಗಬೇಕಲ್ಲವೆ ನೀನು! ನಿನಗೆಲ್ಲಿಂದ ಬಂತೊ ಈ ವ್ಯರ್ಥ ಪ್ರತಿಷ್ಠೆ? ನನ್ನನ್ನು ಆಹ್ವಾನಿ ಸದೆ ನಡೆಸಿದ ಈ ಅಗ್ನಿಕಾರ್ಯಕ್ಕೆ ಇವರು ಸಹಾಯಮಾಡಿಯಾರೇನೋ? ಇದರಿಂದ ನಿನಗೆ ಜಯ ದೊರಕೀತೇನೋ? ಹೇಗೆ ಬಂದುದೊ ಈ ಹುಚ್ಚು ನಿನಗೆ? ನಾನು ನಾಗ ಶ್ರೀಕಂಠ! ನಾನು ಈ ನಾಡಿಗೆ ನಾಥ! ನನ್ನಿಂದಲೇ ಈ ನಾಡಿಗೆ ಶ್ರೀಕಂಠ ಎಂಬ ಹೆಸರು ಬಂದುದು. ಇದು ತಿಳಿಯದೋ ನಿನಗೆ? ನನಗೆ ಎದುರಾಗಿ, ನೀನಿರಲಿ, ಚಂದ್ರ ಸೂರ್ಯ ಗ್ರಹ ತಾರೆಗಳು ನಡೆಯಲಾರವು. ಹ್ಞ! ನಿನಗೆ ತಕ್ಕ ದೊರೆಯಿವನು! ನಿನ್ನಂತಹ ಗತಿಗೆಟ್ಟ ಶೈವರ ಕೃಪೆಗೆ ಕೈನೀಡುವ ಈ ಅರಸನೊಬ್ಬ ಅರಸು! ಇದೊ, ನೀನೂ ನಿನ್ನ ಅರಸನೂ ನಿಮ್ಮ ದುರ್ನಡತೆಯ ಫಲ ವನ್ನು ಅನುಭವಿಸಿರಿ!" ಎಂದು ಸಿಂಹಗರ್ಜನೆ ಮಾಡುತ್ತ ಮುಂದೆ ನುಗ್ಗಿದನು. ನುಗ್ಗಿ, ತನ್ನನ್ನು ಎದುರಿಸಿ ಮೇಲೆ ಬಿದ್ದ ಟೀಟಿಭ, ಪಾತಾಳಸ್ವಾಮಿ, ಕರ್ಣತಾಲರನ್ನು ಒಂದೇ ಏಟಿಗೆ ಒರಸಿ ಕೆಡವಿ, ದೊರೆಯ ಕಡೆ ತಿರುಗಿದನು.

ದೊರೆಯನ್ನು ಯಾರೂ ಎಂದೂ ಹೀಗೆ ಹಳಿದಿರಲಿಲ್ಲ. ಇಂದು ನಾಗ ಶ್ರೀಕಂಠನ ಮಾತು ಕೇಳಿ ದೊರೆಯ ಕೋಪ ಕೆರಳಿತು. ಆ ನಾಗನನ್ನು ಎದುರಿಸಿ ನಿಂತು, ಅವನನ್ನು ಮೀರಿಸಿದ ತಿರಸ್ಕಾರದಿಂದ, "ಎಲ ಕಾಗೆ! ನನ್ನಂತಹ ರಾಜಹಂಸನೆದುರು ನಿಂತು ಭೈರವಾಚಾರ್ಯನ ಅಗ್ನಿಕಾರ್ಯದಲ್ಲಿ ಭಾಗ ಕೇಳುವಷ್ಟು ಗರ್ವವೆ ನಿನಗೆ? ಸುಮ್ಮನೆ ನುಡಿದು ಫಲವೇನು? ನಮ್ಮ ಶೌರ್ಯವಿರುವುದು ತೋಳಿನಲ್ಲಿ, ಮಾತಿನಲ್ಲಲ್ಲ. ಆಯುಧವಿಲ್ಲದ ನಿನ್ನೊಡನೆ ಹೋರಾಡಲಾರೆ. ನೀನು ವೀರನಾದರೆ ಬೇಕಾದ ಆಯುಧವನ್ನು ಹಿಡಿ, ನಿಲ್ಲು!" ಎಂದು ಅಟ್ಟಹಾಸವನ್ನು ಝಳಪಿಸಿ ನಿಂತನು.

ನಾಗ ಶ್ರೀಕಂಠನು ಆ ಮಾತಿಗೆ ರೋಷ ಕಾರುತ್ತ, ಪುನಃ ಪುನಃ ಭುಜವನ್ನು ಆಸ್ಫಾಳನಮಾಡುತ್ತ, "ಹ್ಹ! ಆಯುಧ ಗೀಯುಧವೇಕೆ? ನಿನ್ನ ಮದವನ್ನು ಮುರಿಯಲು ನನ್ನ ಈ ಎರಡು ತೋಳೇ ಸಾಕು!" ಎಂದು ಅರಸನ ಮೇಲೆ ನುಗ್ಗಿದನು. ಅರಸನು ಆಯುಧವಿಲ್ಲದವನೊಡನೆ ಆಯುಧವಿಲ್ಲದೆಯೇ ಹೋರಾಡಬೇಕೆಂಬ ಯುದ್ಧ ಧರ್ಮವನ್ನು ಮರೆಯಲಿಲ್ಲ. ಕತ್ತಿ ಕಿರುಗತ್ತಿಗಳನ್ನು ದೂರ ಬಿಸುಟು, ತಾನೂ ಮಲ್ಲ ಯುದ್ಧಕ್ಕೆ ವೀರಗಚ್ಚೆ ಹಾಕಿದನು.

ನಾಗ ಶ್ರೀಕಂಠನನ್ನು ಸೋಲಿಸುವುದು ಪುಷ್ಪಭೂತಿಗೆ ಕಷ್ಟವಾಗ ಲಿಲ್ಲ. ಮದಿಸಿ ಬೀಗಿದ್ದ ಆ ನಾಗನನ್ನು ಕೆಳಗೆ ಕೆಡವಿ, ಅವನ ಜುಟ್ಟು ಹಿಡಿದು, ಕತ್ತು ಕತ್ತರಿಸಬೇಕೆಂದು ತನ್ನ ಕತ್ತಿಯನ್ನು ಮೇಲೆತ್ತಿದನು. ಇನ್ನೇನು ಹೊಡೆಯಬೇಕು, ಅಷ್ಟರಲ್ಲಿ ಶ್ರೀಕಂಠನ ಎದೆಯ ಮೇಲಿದ್ದ ಜನಿವಾರ ಅರಸನಿಗೆ ಕಾಣಿಸಿತು.

"ಹ್ಹ ಹ್ಹಾ! ಇದೇ ಅಲ್ಲವೆ ನಿನ್ನ ಕೆಟ್ಟ ಚಾಳಿಗೆ ಮೂಲ? ಈ ಜನಿವಾರವಿರುವ ಧೈರ್ಯದಿಂದ ತಾನೆ ನೀನು ಹೆದರದೆ ಈ ತೆರದ ದುರ್ಮಾರ್ಗದಲ್ಲಿ ನಡೆಯುತ್ತಿರುವುದು? ಜನಿವಾರವಿರುವ ನಿನ್ನನ್ನು ಕೊಲ್ಲಬಾರದು" ಎಂದು ಹೇಳಿ ಪುಷ್ಪಭೂತಿಯು ಅವನನ್ನು ಬಿಟ್ಟು ಬಿಟ್ಟನು.

# ವಿಜಯಲಕ್ಷ್ಮಿಯ ವರಪ್ರದಾನ

ಅದೇ ಕ್ಷಣದಲ್ಲಿ ಒಂದು ಮಹಾಪ್ರಕಾಶಮಾನವಾದ ಬೆಳಕು ಬೆಳಗಿತು. ಅರಳಿದ ಕಮಲಗಳ ಸುವಾಸನೆ ಹರಡಿತು. ಕಾಲುಗೆಜ್ಜೆಗಳ ಕಿಣಿಕಿಣಿ ನಾದ ಕಿವಿಗೆ ತಾಗಿತು. ಆ ಸದ್ದು ಬಂದ ಕಡೆ ಎಲ್ಲರೂ ತಿರುಗಿ ನೋಡಿದರು.

ಅವರು ಕಂಡುದೇನು? ಕರಿಮೋಡದ ನಡುವೆ ಬಂದು ನಿಂತ ಮಿಂಚಿನಸೆಳೆಯಂತೆ, ಅರಸನ ಕತ್ತಿಯ ಕಪ್ಪುಮೈಯ ನಡುವೆ ಪ್ರಭಾಯುಕ್ತವಾದ ಸ್ತ್ರೀರೂಪವೊಂದು ಬಂದು ನೆಲಸಿತ್ತು. ಅವಳ ಮೃದುವಾದ ಅಂಗಾಲು ಅಂಗೈಗಳು ಕೆಂಪು ಕಮಲದ ಬಣ್ಣವನ್ನು ಚೆಲ್ಲುತ್ತಿದ್ದುವು. ನಡುನಡುವೆ ಶುಚಿಯಾದ ಉಗುರುಗಳ ಶುಭ್ರಕಾಂತಿ. ಕಾಲಿಗೆ ಕಾಲುಗೆಜ್ಜೆ. ಉಟ್ಟ ರೇಷ್ಮೆಯ ಬಟ್ಟೆ, ಮೇಲಿನ ನೂರಾರು ಹಕ್ಕಿಗಳ ಚಿತ್ರದೊಡನೆ, ಸುಳಿದ ಮಂದಮಾರುತಕ್ಕೆ ಕುಲುಕುತ್ತಿತ್ತು. ನಡುವಿನ ಒಡ್ಯಾಣ, ಎದೆಯ ಮೇಲಿನ ಏಕಾವಳಿ, ಮನಸ್ಸನ್ನು ಅಪಹರಿಸುತ್ತಿತ್ತು. ಕರ್ಣಾಭರಣವು ಹರನ ಜಟಾಜೂಟದ ಅರ್ಧಚಂದ್ರನಂತಿತ್ತು. ಜೊತೆಗೆ, ಕಿವಿಯ ತುದಿಯಲ್ಲಿ ಅಶೋಕಪಲ್ಲವದ ಅಲಂಕಾರ. ಮುಖದಲ್ಲಿ ಕಸ್ತೂರಿಯ ಬೊಟ್ಟು. ಆಕೆಯ ಕಾಂತಿಯನ್ನು ಹೆಚ್ಚಿಸಲು ನಖಶಿಖಾಂತವಾಗಿ ಶ್ರೀಚಂದನದ ಲೇಪ. ಕೊರಳಿನಿಂದ ಇಳಿಬಿದ್ದ ಹೂಹಾರಗಳು ಕಾಲಿನ ವರೆಗು ಹರಿದು, ಸಮುದ್ರದಲ್ಲಿ ನೇರಿದ ನದಿಗಳಂತೆ ಅವಳ ಮೈಯಲ್ಲಿ ಮಲಗಿದ್ದುವು. ತಾವರೆಯೆಸಳುಗಳ ನೆನಪು ಕೊಡುತ್ತಿದ್ದ ಅವಳ ಅಂಗಾಂಗಗಳನ್ನು ಕಂಡರೆ, ಆಕೆ ತಾವರೆಯಿಂದ ಹುಟ್ಟಿದವಳೆಂಬಂತೆ ಕಾಣುತ್ತಿತ್ತು.

ತನ್ನ ಕತ್ತಿಯಲ್ಲಿ ಬಂದು ನಿಂತ ಆ ಸ್ತ್ರೀಯನ್ನು ಕಂಡು ದೊರೆ "ನೀನಾರು ದೇವಿ? ನೀ ಬಂದ ನಿಮಿತ್ತವೇನು?" ಎಂದು ಪ್ರಶ್ನಿಸಿದನು. ಅದಕ್ಕೆ ಆಕೆ "ವೀರ! ನಾನು ಲಕ್ಷ್ಮಿ! ಹಿಂದೆ ಪೃಥು, ಭರತ, ಭಗೀರಥ, ಮುಂತಾದವರ ಬಾವುಟಗಳ ಮೇಲೆ ನಲಿಯುತ್ತಿದ್ದ ವಿಜಯಲಕ್ಷ್ಮಿ. ಸಮರರಂಗದ ಸರೋವರದಲ್ಲಿ ತೇಲಾಡಲು ಬಯಸುವ ರಾಜಹಂಸೆ

ನಾನು. ರಾಜರ ಬೆಳ್ಗೊಡೆಗಳ ಪೊದೆಯಲ್ಲಿ ನಲಿಯುವ ನವಿಲು ನಾನು. ಹರಿತವಾದ ಕತ್ತಿಗಳ ಕಾಡಿನಲ್ಲಿ ಅಲೆದಾಡುವ ಸಿಂಹಿ ನಾನು. ರಾಜ, ನಿನ್ನ ಪ್ರತಾಪಕ್ಕೆ ನಾನು ಮೆಚ್ಚಿದೆನು. ನಿನಗೇನು ವರ ಬೇಕು? ಮನ ಸಾರೆ ಕೇಳು" ಎಂದಳು.

ಆ ವಿಜಯಲಕ್ಷ್ಮಿಯ ಮಾತು ಕೇಳಿ, ದೊರೆ ಅವಳಿಗೆ ನಮಿಸಿ, "ದೇವಿ! ನೀನು ಅನುಗ್ರಹಿಸುವುದಾದರೆ, ಭೈರವಾಚಾರ್ಯರ ಅಭೀಷ್ಟ ಪೂರ್ಣವಾಗಲಿ. ಅವರ ಸಾಧನೆ ಸಿದ್ಧಿ ಕಾಣಲಿ." ಎಂದು ಬೇಡಿದನು.

ದೇವಿಯು ಹಾಗೆಯೇ ಆಗಲೆಂದು ಅನುಗ್ರಹಿಸಿ "ಅರಸ, ಪುಷ್ಪ ಭೂತಿ! ನಿನ್ನ ಮಹಾನುಭಾವತೆಗೆ ಮೆಚ್ಚಿದೆನು. ನೀನು ನಿನ್ನ ಸ್ವಾರ್ಥ ವನ್ನು ನೆನೆಯದೆ, ಬಂದ ಭೈರವಾಚಾರ್ಯನ ಕಾರ್ಯ ಸಾಫಲ್ಯವನ್ನು ಮರೆಯದೆ ನಡೆದುದಕ್ಕೆ ತೃಪ್ತಳಾದೆನು. ನಿನ್ನ ಶಿವ ಭಕ್ತಿಗೆ ಆನಂದಿಸಿ, ಇದೋ, ನಿನಗೆ ನಾನೊಂದು ವರ ಕೊಡುವೆನು. ನಿನ್ನ ಆರಾಧ್ಯದೈವ ವಾದ ಈಶ್ವರನ ಮೂರು ಕಣ್ಣುಗಳಿಗೆ ಸಮನಾಗುವಂತೆ, ಸೂರ್ಯ ಚಂದ್ರ ವಂಶಗಳಿಗೆ ಜೊತೆಯಾಗಿ ನಿನ್ನದೂ ಒಂದು ಮಹಾವಂಶ ಬೆಳೆಯುವುದು. ನೀನೆ ಮೂಲಪುರುಷನಾಗಿ ಹುಟ್ಟಿದ ಈ ವಂಶದ ಅರಸರು ಶೀಲ, ಭಾಗ್ಯ, ಸತ್ಯ, ದಾನ, ಪ್ರತಾಪಗಳಲ್ಲಿ ಅಪ್ರತಿಮರಾಗುವರು. ಈ ವಂಶವು ಅವಿಚ್ಛಿನ್ನವಾಗಿ ಬೆಳೆದು ಅಭಿವೃದ್ಧಿ ಪಡೆಯುವುದು. ವರ್ಧನ ವಂಶವೆಂದು ಹೆಸರುಪಡೆಯುವ ಈ ವಂಶದಲ್ಲಿ ಮುಂದೆ ಹರ್ಷನೆಂಬವನು ಜನಿಸಿ ಚಕ್ರವರ್ತಿಯಾಗುವನು. ಹರಿಶ್ಚಂದ್ರನಂತೆ ರಾಜ್ಯ ಸಂಪಾದಿಸುವನು; ಎರಡನೆಯ ಮಾಂಧಾತನಂತೆ ಲೋಕವಿಜಯಿಯಾಗುವನು. ಆಗ, ಕಮಲ ಹಿಡಿದ ಈ ನನ್ನ ಕೈಗಳು ಅವನಿಗೆ ಚಾಮರ ಹಿಡಿಯುವುವು" ಎಂದು ನುಡಿದು ಅಂತರ್ಧಾನವಾದಳು.

ದೇವಿಯ ಮಾತು ಕೇಳಿ ದೊರೆಯ ಹೃದಯದಲ್ಲಾದ ಸಂತೋಷ ಅಷ್ಟಿಷ್ಟಲ್ಲ. ಇತ್ತ, ಭೈರವಾಚಾರ್ಯನು ದೇವಿಯ ಅನುಗ್ರಹದಿಂದಲೂ ತನ್ನ ವ್ರತದ ಸಾಧನೆಯಿಂದಲೂ ಕುಂತಲ, ಕಿರೀಟ, ಕುಂಡಲ, ಹಾರ, ಕೇಯೂರ, ಮೇಖಲೆ, ಮುದ್ಗರ, ಖಡ್ಗಗಳನ್ನು ಪಡೆದು ವಿಧ್ಯಾಧರ

ನಾದನು. ವಿದ್ಯಾಧರನಾಗಿ, ತನಗೆ ಸಹಾಯಮಾಡಿದುದಕ್ಕಾಗಿ ದೊರೆಗೆ ತನ್ನ ಕೃತಜ್ಞತೆಯನ್ನು ವ್ಯಕ್ತಪಡಿಸಿದನು. ಟೀಟಿಭನನ್ನೂ ಮಿಕ್ಕ ಇಬ್ಬರನ್ನೂ ಗಾಢವಾಗಿ ತಬ್ಬಿಕೊಂಡು, ಅವರನ್ನು ಬಿಡಲಾರದೆ ಬಿಟ್ಟು ವಿದ್ಯಾಧರಲೋಕಕ್ಕೆ ಹೊರಟನು. ಅತ್ತ, ನಾಗ ಶ್ರೀಕಂಠನು ಮುದವಡಗಿ ನಮ್ರನಾಗಿ, ದೊರೆಯ ಅಪ್ಪಣೆ ಪಡೆದು ತಾನು ಬಂದ ಬಿರುಕಿನಲ್ಲಿ ಮರೆಯಾದನು.

ಆ ವೇಳೆಗೆ ರಾತ್ರೆ ಮುಗಿಯುತ್ತ ಬಂದಿತ್ತು. ಅರಳುವ ಹೂಗಳ ವಾಸನೆಯೊಡನೆ, ನಿದ್ದೆ ತಿಳಿದು ಎಚ್ಚತ್ತ ಹಕ್ಕಿಗಳ ಕಿಚಿಪಿಚಿಯೊಡನೆ, ಬೆಳಗು ಮೆಲ್ಲನೆ ಬಂತು. ಆಗ ಅರಸನು ಟೀಟಿಭನನ್ನೂ ಇತರರನ್ನೂ ತನ್ನ ಸಂಗಡ ಕರೆದುಕೊಂಡು ಹೊರಟನು. ಬಳಿಯ ಸರೋವರದಲ್ಲಿ ಮಿಂದು, ಅವರು ತಮ್ಮ ಆಯಾಸವನ್ನೂ ಕಾಳಗದ ಕಶ್ಮಲವನ್ನೂ ಕಳೆದರು. ಅನಂತರ ಅರಸನು ಅವರನ್ನು ನಗರಕ್ಕೆ ಕರೆದೊಯ್ದು ಅವರಿಗೆ ಬೇಕಾದುದೆಲ್ಲವನ್ನೂ ಒದಗಿಸಿ ತನ್ನ ಬಳಿಯೇ ನಿಲ್ಲಿಸಿಕೊಂಡನು.

ಅವರಲ್ಲಿ ಟೀಟಿಭ ಮಾತ್ರ, ಕೆಲವು ದಿನಗಳಾದ ಮೇಲೆ, ದೊರೆ ಬೇಡವೆಂದರೂ ಒಪ್ಪದೆ ತಪಸ್ಸಿಗಾಗಿ ಕಾಡಿಗೆ ನಡೆದನು. ಯುದ್ಧಪ್ರಿಯರಾದ ಪಾತಾಳಸ್ವಾಮಿ ಕರ್ಣತಾಲರು ದೊರೆಯ ಸೇವೆಯಲ್ಲಿ ನಿಂತರು; ದೊರೆಯೊಡನೆಯೆ ಇದ್ದು ಅವನೊಡನೆಯೆ ಮುಪ್ಪಾದರು.



# ವರ್ಧನ ರಾಜಕುಮಾರ ಹರ್ಷ

---

## ಹರ್ಷನ ತಂದೆತಾಯಿ

ವಿಜಯಲಕ್ಷ್ಮಿ ಕೊಟ್ಟ ವರದಂತೆ ಪುಷ್ಯಭೂತಿಯ ವಂಶ ಅವಿಚ್ಛಿನ್ನವಾಗಿ ಬೆಳೆಯುತ್ತ ಬಂತು. ಆ ವಂಶದಲ್ಲಿ ಪ್ರಭಾಕರವರ್ಧನನೆಂಬವನು ಜನಿಸಿದನು. ಆತನು ತನ್ನ ಶೌರ್ಯ ಪ್ರತಾಪಗಳಿಂದ 'ಪ್ರತಾಪಶೀಲ'ನೆಂದು ಪ್ರಸಿದ್ಧನಾದನು. ಅವನು ಹೂಣರನ್ನು ಜಯಿಸಿ, ಸಿಂಧುಪ್ರಾಂತ್ಯದ ದೊರೆಯನ್ನು ಸೋಲಿಸಿ, ಗುಜರಾತಿನವರ ಮದ ಮುರಿದು, ಗಾಂಧಾರದವರ ಗರ್ವವನ್ನಡಗಿಸಿ, ಲಾಟರನ್ನು ಗೆದ್ದು, ಮಾಳವರನ್ನು ವಶಪಡಿಸಿಕೊಂಡು, ವಿಸ್ತಾರವಾದ ರಾಜ್ಯವನ್ನು ಸ್ವಂತ ಶಕ್ತಿಯಿಂದ ಸಂಪಾದಿಸಿ 'ಮಹಾರಾಜಾಧಿರಾಜ'ನೆನಿಸಿಕೊಂಡನು. ಪ್ರಭಾಕರವರ್ಧನನ ಪೂರ್ವಜರಾದ ನರವರ್ಧನ, ಮೊದಲನೆಯ ರಾಜ್ಯವರ್ಧನ, ಆದಿತ್ಯವರ್ಧನರು ಬರಿಯ 'ಮಹಾರಾಜ'ರೆನಿಸಿಕೊಂಡಿದ್ದರು ಮಹಾರಾಜಾಧಿರಾಜ ಪ್ರಭಾಕರವರ್ಧನನ ಕಾಲದಲ್ಲಿ ವರ್ಧನ ರಾಜ್ಯದ ಮೇರೆ ವಿಸ್ತರಗೊಂಡಿತು. ಅವನ ಕಾಲದಲ್ಲಿ ರಾಜ್ಯ ಬೆಳೆದುದು ಮಾತ್ರವಲ್ಲ, ಧರ್ಮ ಬೆಳೆಯಿತು, ಯಜ್ಞಯಾಗಾದಿಗಳು ಪುನಃ ತಲೆಯೆತ್ತಿಕೊಂಡುವು; ರಾಜ್ಯದಲ್ಲಿ ಸುಖ ಶಾಂತಿ ಸಂತುಷ್ಟಿಗಳು ನೆಲೆಗೊಂಡುವು.

ಪ್ರಭಾಕರವರ್ಧನನ ಪತ್ನಿಯ ಹೆಸರು ಯಶೋವತಿ. ಈಕೆ ಶಂಕರನ ಪಾರ್ವತಿಯಂತೆ, ವಿಷ್ಣುವಿನ ಲಕ್ಷ್ಮಿಯಂತೆ, ವಸಿಷ್ಠನ ಅರುಂಧತಿಯಂತೆ ಇದ್ದಳೆಂದು ಹೇಳುತ್ತಿದ್ದರು. ರಾಣಿಯು ತನ್ನ ಮಾತಿನಿಂದ, ತನ್ನ ನಡತೆಯಿಂದ ಎಲ್ಲರ ಪ್ರೀತಿ, ನಂಬಿಕೆ, ವಿಶ್ವಾಸಗಳನ್ನು ಸಂಪಾದಿಸಿ, ಅರಸನಿಗೆ, ತಕ್ಕ ಅರಸಿಯಾಗಿದ್ದಳು.

ಅರಸನು ಸಹಜವಾಗಿ ಆದಿತ್ಯಭಕ್ತನು. ಪ್ರತಿದಿನವೂ ಸೂರ್ಯೋದಯಕ್ಕೆ ಮುಂಚೆಯೆ ಎದ್ದು, ಸ್ನಾನಮಾಡುವನು. ಅನಂತರ ಶುಭ್ರ

ವಸ್ತ್ರಗಳನ್ನು ಧರಿಸಿ, ಚಂದನದಿಂದ ನೆಲದಮೇಲೆ ಬರೆದ ಮಂಡಲದಲ್ಲಿ ಪೂರ್ವಾಭಿಮುಖನಾಗಿ ಮೊಣಕಾಲೂರಿ ಕುಳಿತು, ಪದ್ಮರಾಗದ ಪಾತ್ರೆಯಲ್ಲಿ ಕೆಂಪುಕಮಲಗಳನ್ನಿತ್ತು ಸೂರ್ಯನನ್ನು ಆರಾಧಿಸುವನು. ಹೀಗೆ ಬೆಳಗು ಮಧ್ಯಾಹ್ನ ಬೈಗುಗಳಲ್ಲಿ ಸೂರ್ಯಮಂತ್ರವನ್ನು ಜಪಿಸಿ ಆರಾಧಿಸುತ್ತ, ಸಂತತಿಗಾಗಿ ಸೂರ್ಯದೇವನನ್ನು ಬೇಡುವನು.

## ಯಶೋವತಿಯ ಕನಸು

ಇಷ್ಟರಲ್ಲಿಯೇ ಅವರ ಪ್ರಾರ್ಥನೆ ಫಲ ಬಿಡುವ ಸಮಯ ಬಂತು.

ಒಂದು ದಿನ ದೊರೆ ಬಿಸಿಲುಮುಚ್ಚಿನಲ್ಲಿ ಮಲಗಿದ್ದನು. ಪಕ್ಕದ ಮಂಚದ ಮೇಲೆ ರಾಣಿ ತಾನೂ ಮಲಗಿದ್ದಳು. ರಾತ್ರಿ ಕಳೆದು ಬೆಳಗಿನ ಜಾವದ ಸಮಯ. ಮಲಗಿದ್ದ ರಾಣಿ ಇದ್ದಕ್ಕಿದ್ದಂತೆ "ಕಾಪಾಡು, ಆರ್ಯಪುತ್ರ! ಕಾಪಾಡು!" ಎಂದು ಕಿರಾರನೆ ಕಿರಿಚಿಕೊಂಡು, ಮಂಚದಿಂದ ನೆಗೆದೆದ್ದಳು. ಆವಳ ಮೈ ಥರಥರನೆ ಕಂಪಿಸುತ್ತಿತ್ತು.

ರಾಣಿಯು ಕಿರಿಚಿದುದು ಅರಸನ ಕಿವಿಗೆ ಕಾದ ಸೀಸದಂತೆ ಆಯ್ತು. ಥಟಾರನೆ ನೆಗೆದೆದ್ದ ಪ್ರಭಾಕರನ ಬಲಗೈ ಪಕ್ಕದಲ್ಲಿದ್ದ ಕತ್ತಿಯನ್ನು ಹಿಡಿಯಿತು, ಎಡಗೈ ಹಾಸಿಗೆಯ ಪರದೆಯನ್ನು ಹರಿಯಿತು. ರಾಣಿಯ ಬಳಿಗೆ ಬಂದು ಅವಳನ್ನು ಸಮಾಧಾನಪಡಿಸುತ್ತ, ಕಾರಣವೇನೆಂದು ಅತ್ತ ಇತ್ತ ನೋಡಿದನು. ಸುತ್ತ ಏನೂ ಕಾಣಿಸದಿರಲು, "ದೇವಿ, ಏನಾಯಿತು?" ಎಂದು ರಾಣಿಯನ್ನು ಕೇಳಿದನು.

ಆ ವೇಳೆಗೆ ರಾಜನ ಸಾನ್ನಿಧ್ಯದಿಂದಲೂ ಅಂತಃಪುರದ ಸ್ತ್ರೀಪರಿಜನವೆಲ್ಲ ಬಂದು ನೆರೆದುದರಿಂದಲೂ ಯಶೋವತಿಯ ಭಯ ಕಡಿಮೆಯಾಗಿತ್ತು. "ಆರ್ಯಪುತ್ರ, ನಾನು ಒಂದು ಕನಸು ಕಂಡೆನು. ಪ್ರಜ್ವಲಿಸುವ ಸೂರ್ಯಮಂಡಲದಿಂದ ಇಬ್ಬರು ಪ್ರಕಾಶಮಾನರಾದ ಯುವಕರು ಹೊರಬಂದುದನ್ನು ಕಂಡೆ. ಕಿರೀಟ, ಕವಚ, ಕುಂಡಲ, ಕೇಯೂರ, ಖಡ್ಗಗಳನ್ನು ಧರಿಸಿ ರಕ್ತಗೆಂಪಿನಲ್ಲಿ ಮಿಂದು ಬಂದ ಆ ವೀರಬಾಲರಿಗೆ ಪೃಥ್ವಿಯೆಲ್ಲವೂ ಸಾಷ್ಟಾಂಗ ನಮಸ್ಕಾರ ಮಾಡಿತು. ಅವರು ಚಂದ್ರ

ನಂತಿದ್ದ ಕುಮಾರಿಯೊಬ್ಬಳೊಡನೆ ಸೂರ್ಯಮಂಡಲವನ್ನು ಬಿಟ್ಟು ಭೂಮಿಗಿಳಿದರು. ಇಳಿದವರು ನನ್ನ ಬಳಿ ಬಂದು, ಕತ್ತಿಯಿಂದ ನನ್ನ ಗರ್ಭಕೋಶವನ್ನು ಕತ್ತರಿಸಿ ಒಳಹೊಗಲು ಪ್ರಯತ್ನಿಸಿದರು. ನನ್ನ ಎದೆ ನಡುಗಿತು, ಕಿರಿಚಿಕೊಂಡೆ'' ಎಂದಳು.

ನಿಜವಾಗಿಯೂ ಎದೆ ನಡುಗಿಸುವ ರಾಣಿಯ ಸ್ವಪ್ನವನ್ನು ಅರಸನೂ ಪರಿಜನರೂ ತುಟಿ ಪಿಟುಕಿಸದೆ ಕೇಳಿದರು. ರಾಣಿಯ ಮಾತು ನಿಲ್ಲುವ ವೇಳೆಗೆ ಬೆಳಗಿನ ಜಾವದ ಮಂಗಳವಾದ್ಯ ಪ್ರಾರಂಭವಾಯಿತು. ಕೊಂಬು ಕಹಳೆಗಳು ಮೊಳಗಿದುವು, ಭೇರಿ ನಗಾರಿಗಳು ಧ್ವನಿಮಾಡಿದುವು. ಆ ಮಂಗಳಸೂಚಕವಾದ ವಾದ್ಯಗಳನ್ನು ಕೇಳಿ, ದೊರೆಯು ಸಂತೋಷದಿಂದ "ರಾಣಿ! ನೀನು ಸಂತೋಷದಿಂದ ಹಿಗ್ಗಬೇಕಾದ ಸಮಯದಲ್ಲಿ ಖಿನ್ನಳಾಗಿ ಕುಗ್ಗಿರುವೆ. ನಿನ್ನ ತಂದೆತಾಯಿಯರ ಅಭೀಷ್ಟ ನೆರವೇರುವ ಸಮಯ ಬಂತು. ನಮ್ಮ ಸೂರ್ಯೋಪಾಸನೆಯ ಫಲ ಪಕ್ವವಾಗುವ ಕಾಲ ಬಂತು. ಭಗವಾನ್ ಆದಿತ್ಯನು ನಮಗೆ ಅಭಿಪ್ರಸನ್ನನಾದನು. ದೇವಿ, ಈ ಕನಸಿನಿಂದ ಸೂಚಿತವಾಗಿರುವಂತೆ, ಸೂರ್ಯದೇವನ ಅನುಗ್ರಹದಿಂದ ನೀನು ಮೂವರು ಕೀರ್ತಿವಂತ ಕುಮಾರರ ತಾಯಿಯಾಗುವೆ!'' ಎಂದನು. ಅದು ಕೇಳಿ ರಾಣಿ ಆನಂದಪಟ್ಟಳು. ಅರಸನು ತನ್ನ ಬೆಳಗಿನ ಕರ್ಮಗಳಿಗಾಗಿ ಮಹಡಿಯಿಂದ ಕೆಳಕ್ಕಿಳಿದನು.

## ರಾಜ್ಯವರ್ಧನ

ಮೇಲೆ ಹೇಳಿದ ಕನಸು ಕಂಡ ಕೊಂಚ ದಿನಗಳಲ್ಲಿ ಯಶೋವತೀದೇವಿ ಗರ್ಭಿಣಿಯಾದಳು. ಹತ್ತು ತಿಂಗಳು ಗರ್ಭ ಹೊತ್ತು ತನ್ನ ಮೊದಲ ಮಗುವನ್ನು ಪ್ರಸವಿಸಿದಳು. ಆ ಮಗುವಿನ ಜನನದಿಂದ, ಅರಮನೆಗೆ ಮಾತ್ರವಲ್ಲ, ಸಮಸ್ತ ಜನಪದಕ್ಕೇ ಸಂತೋಷವಾಯಿತು. ಆ ಸಂತೋಷದ ಪ್ರದರ್ಶನವಾಗಿ ಅವರು ಆಚರಿಸಿದ ಹಬ್ಬಗಳು ಒಂದು ತಿಂಗಳು ನಡೆದುವು. ಪ್ರಜೆಗಳ ಆನಂದದ ಅತಿರೇಕದಲ್ಲಿ ಆ ಒಂದು ತಿಂಗಳು ಒಂದು ದಿನವೆಂಬಂತೆ ಕಳೆದುಹೋಯಿತು. ರಾಜ್ಯಕ್ಕೇ ಆನಂದ

ದಾಯಕನಾದ ಆ ಮೊದಲ ಮಗುವಿಗೆ 'ರಾಜ್ಯವರ್ಧನ' ಎಂದು ನಾಮಕರಣಮಾಡಿದರು.

## ಹರ್ಷ

ರಾಜ್ಯವರ್ಧನನಿಗೆ ಮೂರು ನಾಲ್ಕು ವರ್ಷವಾಗಿರಬಹುದು; ಯಶೋವತಿ ಪುನಃ ಗರ್ಭವತಿಯಾದಳು. ಗರ್ಭಿಣಿಯರಿಗೆ ಸಹಜವಾದ ಬಯಕೆಗಳು ಬಂದರೂ, ಅವಳ ಬಯಕೆಗಳು ವಿಚಿತ್ರವಾಗಿದ್ದುವು. ಆ ಬಯಕೆಗಳು ವೀರಾಧಿವೀರರನ್ನು ಜನಿಯಿಸುವ ವೀರಮಾತೆಗೆ ತಕ್ಕುವು. ಆ ಬಯಕೆಗಳಲ್ಲಿ ಒಂದು—ನಾಲ್ಕು ಸಮುದ್ರಗಳ ಮಿಶ್ರಿತ ಜಲದಲ್ಲಿ ಮಿಾಯಬೇಕೆಂಬುದು. ಸಮುದ್ರತೀರದ ಮರಳು ಗುಡ್ಡೆಗಳಲ್ಲೂ ಲತಾಗೃಹಗಳಲ್ಲೂ ವಿಹರಿಸಬೇಕೆಂಬುದು ಇನ್ನೊಂದು. ಬಳಿಯಲ್ಲಿ ಮಣಿಖಚಿತವಾದ ಕನ್ನಡಿಗಳಿದ್ದರೂ, ಹೊಳೆವ ಕತ್ತಿಯ ಅಲಗಿನಲ್ಲಿಯೇ ಮುಖ ನೋಡಿಕೊಳ್ಳಬೇಕೆಂದು ಅವಳು ಹಟಹಿಡಿಯುವಳು. ವೀಣೆಯ ತಂತಿಯ ಶಬ್ದವನ್ನು ಬಿಟ್ಟು, ಬಿಲ್ಲಿನ ಹಗ್ಗದ ಟಂಕಾರವನ್ನು ಕೇಳಿ ಸುಖಪಡುವಳು. ಪಂಜರದೊಳಗಿನ ಸಿಂಹಗಳನ್ನು ನೋಡಿ ನೋಡಿ ಆನಂದಪಡುವಳು.

ತಿಂಗಳು ತಿಂಗಳು ಕಳೆಯಿತು. ಜ್ಯೇಷ್ಠಮಾಸ ಬಂತು. ಆ ಮಾಸದ ಬಹುಳಪಕ್ಷ ದ್ವಾದಶಿಯ ದಿನ ಮುಚ್ಚಂಜೆ ಮುಗಿದು ರಾತ್ರಿ ಹುಟ್ಟುತ್ತಿರುವಾಗ, ಯಶೋವತಿಗೆ ಎರಡನೆಯ ಮಗು ಹುಟ್ಟಿತೆಂದು ಅಂತಃಪುರದ ಕೋಲಾಹಲವು ಕೂಗಿಟ್ಟಿತು. ಯಶೋವತಿಯ ಪ್ರಿಯ ಸಖಿಯಾದ ಸುಯಾತ್ರೆಯು ಓಡಿ ದೊರೆಯ ಪಾದದ ಬಳಿ ಬಿದ್ದು "ದೇವ! ತಮಗೆ ದ್ವಿತೀಯ ಪುತ್ರೋತ್ಸವವಾಯಿತು" ಎಂದು ಸಂತಸದ ಸುದ್ದಿ ಚೆಲ್ಲಿದಳು.

ಅದೇ ಸಮಯಕ್ಕೆ ಆಸ್ಥಾನದ ಜ್ಯೋತಿಷ್ಕನಾದ ತಾರಕನು ಬಂದನು. ಹಿಂದೆ ಅವನು ಅನೇಕ ಸಲ ಹೇಳಿದ ಜ್ಯೋತಿಷ ಸರಿಬಂದಿತ್ತು. ಅವನು ಬಂದು "ಕಿವಿಗೊಡು, ಮಹಾರಾಜ! ಇಂತಹ ಶುಭ್ರ ಶುಭ ಮುಹೂರ್ತದಲ್ಲಿಯೇ, ಮಹಾರಾಜ, ಪ್ರಸಿದ್ಧನಾದ ಮಾಂಧಾತನು

ಜನ್ಮವೆತ್ತಿದುದು. ಅಂದಿನಿಂದ ಇದುವರೆಗೆ ಚಕ್ರವರ್ತಿಯ ಜನ್ಮ ಗ್ರಹಣಕ್ಕೆ ತಕ್ಕ ಇಂತಹ ವೇಳೆ ಕೂಡಿಬಂದಿರಲಿಲ್ಲ. ಭರತ, ಅರ್ಜುನ, ಮಾಂಧಾತ, ಭಗೀರಥ, ಯುಧಿಷ್ಠಿರ, ನಗರ, ನಹುಷ ಎಂಬ ಸಪ್ತ ಚಕ್ರ ವರ್ತಿಗಳಿಗೆ ಇವನು ಅಗ್ರನಾಗುವನು. ಇವನಲ್ಲಿ ಚಕ್ರವರ್ತಿಯ ಸಪ್ತ ಚಿಹ್ನೆಗಳಿವೆ. ಸಪ್ತ ಮಹಾರತ್ನಗಳು ಇವನವೆ ಆಗುವುವು. ಇವನು ಏಳು ಸಮುದ್ರಗಳನ್ನೂ ಪಾಲಿಸುವನು ಸಪ್ತಾಶ್ವನಾದ ಸೂರ್ಯದೇವನ ಸಮನಾಗುವನು" ಎಂದು ನುಡಿದನು.

ಈ ಮಗು ಜನಿಸಿದಾಗ ನಡೆದ ಹಬ್ಬ, ನಾಲ್ಕು ವರ್ಷ ಹಿಂದೆ ನಡೆದುದಕ್ಕಿಂತ ದೀರ್ಘವಾಗಿತ್ತು, ಹೆಚ್ಚು ವಿಜೃಂಭಣೆಯಿಂದ ಕೂಡಿತ್ತು. ಈ ಮಗು ಹುಟ್ಟಿದುದಕ್ಕೆ ಜನಪದದ ಹೃದಯದಲ್ಲಾದ ಭಾವವನ್ನು ಪ್ರಕಾಶಗೊಳಿಸುವಂತೆ, ಮಗುವಿಗೆ 'ಹರ್ಷ' ಎಂದು ಹೆಸರಿಟ್ಟರು.

## ರಾಜ್ಯಶ್ರೀ

ರಾಜ್ಯವರ್ಧನನಿಗೆ ಆರು ವರುಷವಾಗುತ್ತ ಬಂತು. ಹರ್ಷನು ತನ್ನ ದಾದಿಯ ಬೆರಳು ಹಿಡಿದು ಐದಾರು ತಪ್ಪು ಹೆಜ್ಜೆಯಿಡುವಷ್ಟು ಬೆಳೆದನು. ಗೋರೋಚನ ಪೂಸಿದ ಆ ಮಗುವಿನ ಮೈ ಪುಟವಿಕ್ಕಿದ ಚಿನ್ನದಂತಿತ್ತು. ಕತ್ತಿಗೆ ಹಾಕಿದ ಹುಲಿಯುಗುರು ಮಾಲೆ, ಕರ್ಣ ಮನೋಹರವಾದ ತೊದಲು ಮಾತು, ಮುಖದ ಮುಗ್ಧ ನಗು, ನಕ್ಕಾಗ ಬೆಳಗುವ ಪುಟ್ಟಹಲ್ಲು, ಇವು ಮಗುವನ್ನು ಕಂಡವರ ಕಣ್ಣಿನ ಪುಣ್ಯ ವಾಗಿತ್ತು.

ಅದೇ ಸಮಯದಲ್ಲಿ ಯಶೋವತಿಯು ಮೂರನೆಯ ಬಾರಿ ಬಸುರಿ ಯಾದಳು; ತಿಂಗಳು ಮುಗಿದ ಮೇಲೆ, ಮೇನೆಯು ಗೌರಿಯನ್ನು ಪಡೆ ದಂತೆ, ಯಶೋವತಿಯು ರಾಜ್ಯಶ್ರೀ ಎಂಬ ಕನ್ಯಾರತ್ನವನ್ನು ಪ್ರಸವಿ ಸಿದಳು.

## ಭಂಡಿ

ಆ ವೇಳೆಗೆ, ಬೆಳೆಯುತ್ತಿದ್ದ ರಾಜಕುಮಾರರಿಬ್ಬರ ಸೇವೆಗೆ ಭಂಡಿ ಯೆಂಬ ಬಾಲಕನು ಸೇರಿದನು. ಇವನು ಯಶೋವತಿಯ ಸೋದರನ

ಮುಗ. ಅರಮನೆಗೆ ಬಂದಾಗ ಆ ಬಾಲಕನಿಗೆ ಎಂಟು ವರ್ಷ ಕತ್ತಿನ ಬಳಿ ಇಳಿಬಿದ್ದಿದ್ದ ಅವನ ಕೂದಲು ಕಂಡರೆ-ಕಾಮನ ನೆನಪಾಗುತ್ತಿತ್ತು, ಆ ಕೂದಲು ಈಶ್ವರನ ಕೋಪಾಗ್ನಿಯ ಹೊಗೆಯಂತಿತ್ತು. ಒಂದು ಕಿವಿಯಲ್ಲಿ ಪುಷ್ಯರಾಗ, ಇನ್ನೊಂದರಲ್ಲಿ ಮುತ್ತಿನಾಭರಣ—ಹೀಗೆ ಅಲಂಕೃತನಾದ ಅವನು ಹರಿಹರರ ಮಿಶ್ರಾವತಾರದಂತಿದ್ದನು. ತೋಳಿಗೆ ಬಿಗಿದಿದ್ದ ವಜ್ರದ ತೋಳುಬಳೆ, ಕ್ಷತ್ರಿಯರ ಸಂಹಾರದಲ್ಲಿ ಕೊಡಲಿಯನ್ನು ಸವೆಸಿ, ಉಳಿದ ಕೊಡಲಿಯ ಹಿಡಿಯ ನೂಲನ್ನು ತೋಳಿಗೆ ಬಿಗಿದು ಬಂದ ಪರಶುರಾಮನನ್ನು ನೆನಪಿಗೆ ತರುತ್ತಿತ್ತು. ಎದೆಯ ಮೇಲೆ ತೂಗಾಡುತ್ತಿದ್ದ ಹವಳದ ಸರವು, ನರಸಿಂಹನ ಮುರಿದ ಉಗುರುಗಳನ್ನು ಇನ್ನೂ ವಕ್ಷದಲ್ಲಿ ಧರಿಸಿ ಎದ್ದುಬಂದ ಹಿರಣ್ಯಕಶಿಪುವೇ ಇವನೆಂದು ಭ್ರಮೆಯನ್ನುಂಟುಮಾಡುತ್ತಿತ್ತು ಭಣ್ಡಿಯು ಇನ್ನೂ ಚಿಕ್ಕವನಾದರೂ ಶೌರ್ಯ ಮಹಾವೃಕ್ಷದ ಮೊಳಕೆಯಂತೆ ಇದ್ದನು.

ದೊರೆ ಪ್ರಭಾಕರನು ಭಣ್ಡಿಯನ್ನು ತನ್ನ ಮಕ್ಕಳಂತೆಯೇ ಪ್ರೀತಿಸುತ್ತಿದ್ದನು. ರಾಜ್ಯವರ್ಧನ ಹರ್ಷರು ಅವನನ್ನು ಇನ್ನೊಬ್ಬ ಸೋದರನೆಂಬಂತೆ ಕಾಣುತ್ತಿದ್ದರು. ಹೀಗೆ ಮೂವರೂ ಅನ್ಯೋನ್ಯವಾಗಿ ಬೆಳೆದು ಯೌವನವನ್ನು ಮುಟ್ಟಿದರು. ಕಾಲ ಕಳೆದಂತೆಲ್ಲ ಅವರ ದೇಹ ಬೆಳೆಯಿತು, ಸೌಂದರ್ಯ ವೃದ್ಧಿಯಾಯಿತು ಕ್ಷತ್ರಿಯಯೋಗ್ಯವಾದ ಕಾಯಬಲವನ್ನು ಬೆಳೆಸಿ ಸಮಸ್ತ ಅಸ್ತ್ರಶಸ್ತ್ರಗಳಲ್ಲಿಯೂ ಅವರು ಪ್ರವೀಣರಾದರು ಕೊಂಚ ಕಾಲದಲ್ಲಿಯೇ ರಾಜ್ಯವರ್ಧನ ಹರ್ಷರ ಹೆಸರು ಜನಜನಿತವಾಗಿ ದ್ವೀಪಾಂತರಗಳಿಗೂ ಹರಡಿತು.

## ಕುಮಾರಗುಪ್ತ ಮಾಧವಗುಪ್ತರು

ಒಂದು ದಿನ, ದೊರೆ ತನ್ನ ಮಕ್ಕಳಿಬ್ಬರನ್ನೂ ಕರೆದು ಕುಳ್ಳಿರಿಸಿಕೊಂಡು ಹೀಗೆಂದನು. "ನನ್ನ ಮಕ್ಕಳೆ, ರಾಜ್ಯಾಂಗಗಳಲ್ಲಿ ಮೊದಲನೆಯದಾದ ಒಳ್ಳೆಯ ಭೃತ್ಯರು ಸಿಕ್ಕುವುದು ದುರ್ಲಭ ಈಗಿರುವ ಪಾರ್ಥಿವರೆಲ್ಲ ಸಾಮಾನ್ಯವಾಗಿ ಕ್ಷುದ್ರರು. ಅವರ ಭೃತ್ಯರಾದವರೋ, ಬರಿಯ ವಿಲಾಸಗಳಲ್ಲಿ ಮುಳುಗಿ, ಮುಖಸ್ತುತಿ ಮಾಡಿ, ಒಳಗೊಂದು ಹೊರ

ಗೊಂದು ನಟಿಸಿ, ತಮ್ಮ ಮನಸ್ಸು ಬಂದಂತೆ ಆ ರಾಜರನ್ನು ಕುಣಿಸಿ, ಉಪಕಾರಕ್ಕಿಂತ ಹೆಚ್ಚಾಗಿ ಅಪಕಾರವನ್ನೇ ಮಾಡುತ್ತಾರೆ. ಅರಸನ ಹಿತವನ್ನೇ ಬಯಸುವ ಒಳ್ಳೆಯ ಭೃತ್ಯರು ಸಿಕ್ಕುವುದು ಸುಲಭವಲ್ಲ. ಅದಕ್ಕಾಗಿ ನಿಮ್ಮ ಸೇವೆಗೆ ನಾನು ಇಬ್ಬರನ್ನು ಆರಿಸಿರುವೆನು. ಅವರು ಮಾಳವದೇಶಾಧಿಪನ ಮಕ್ಕಳಾದ ಕುಮಾರಗುಪ್ತ ಮಾಧವಗುಪ್ತರು; ಸೋದರರು. ಮೈಗೆ ಅಂಟಿದ ಎರಡು ತೋಳುಗಳಂತೆ ನಿಮ್ಮನ್ನು ಬಿಟ್ಟು ಅಗಲದಿರತಕ್ಕವರು. ಅವರು ನಿರ್ಮಲರು, ದೋಷರಹಿತರು, ವಿಕ್ರಮರು, ವಿನೀತರು, ಶುದ್ಧರು; ನೋಡಲು ಅಭಿರೂಪರು. ಅವರನ್ನು ನಾವು ಅನೇಕ ಸಲ ಪರೀಕ್ಷೆ ಮಾಡಿ ನೋಡಿದ್ದೇವೆ. ಅವರನ್ನು ನೀವು ಸೇವೆಗೆ ನಿಲ್ಲಿಸಿಕೊಂಡು, ಇತರ ಪರಿಜನರಿಗಿಂತ ವಿಶೇಷವಾಗಿ ಅವರನ್ನು ಕಾಣಬೇಕು.''

ಹೀಗೆ ಹೇಳಿ, ದೊರೆಯು ಆ ಗುಪ್ತಕುಮಾರರನ್ನು ಕರೆತರಲು ದೂತನನ್ನು ಕಳುಹಿಸಿದನು. ಕೊಂಚ ಹೊತ್ತಿನಲ್ಲ, ಎರಡು ಜಂಗಮ ಪರ್ವತಗಳು ನಡೆದು ಬರುವಂತೆ ಸೋದರರಿಬ್ಬರೂ ದೊರೆಯ ಸನ್ನಿಧಿಗೆ ಬಂದರು; ಅವನಿಗೆ ನಮಸ್ಕರಿಸಿ, ಅವನು ನಿರ್ದೇಶಿಸಿದ ಪೀಠಗಳಲ್ಲಿ ಕುಳಿತರು. ಪ್ರಭಾಕರನು ತನ್ನ ಮಕ್ಕಳಿಗೆ ಅವರ ಪರಿಚಯಮಾಡಿಕೊಟ್ಟನು. ಅವರು ಆ ರಾಜಪುತ್ರರ ಸೇವೆಗೆ ನಿಲ್ಲಲು ಸಮ್ಮತಿಸಿ, ಅವರ ಸ್ವಾಮಿತ್ವವನ್ನು ಒಪ್ಪಿಕೊಂಡಂತೆ ನಮಸ್ಕರಿಸಿದರು. ಅಂದಿನಿಂದ, ದೊರೆ ಹೇಳಿದ ಹಾಗೆ ಮೈ ಬಿಟ್ಟು ಅಗಲದ ತೋಳುಗಳ ರೀತಿಯಲ್ಲಿ, ಅವರು ಆ ರಾಜಪುತ್ರರ ಜೊತೆಯಲ್ಲಿಯೇ ಇರುತ್ತಿದ್ದರು.

## ರಾಜ್ಯಶ್ರೀಯ ವಿವಾಹ

ಇತ್ತ ರಾಜಪುತ್ರರು ಯೌವನದ ಕಡೆ ಮುಖ ಮಾಡಿ ಬೆಳೆಯುತ್ತಿದ್ದರೆ, ಅತ್ತ ರಾಜಕುಮಾರಿ ರಾಜ್ಯಶ್ರೀ ತಾನೂ ಯುವತಿಯಾದಳು. ರಾಜಪುತ್ರರು ಅಸ್ತ್ರಶಸ್ತ್ರಗಳಲ್ಲಿ ಪ್ರವೀಣರಾದರೆ, ರಾಜ್ಯಶ್ರೀಯು ನೃತ್ಯಗೀತ ಮುಂತಾದ ಸ್ತ್ರೀಜನಯೋಗ್ಯವಾದ ವಿದ್ಯೆಯಲ್ಲಿ ಪಂಡಿತೆಯಾದಳು. ಇಂತಹ ಸಂಪನ್ನೆಯ ಕಡೆಗೆ, ಗುರಿಗೆ ಎರಗುವ ಬಾಣಗಳಂತೆ, ಎಲ್ಲ ರಾಜರ ದೃಷ್ಟಿಯೂ ತಿರುಗಿತ್ತು.

ಅದು ಕಂಡು ಪ್ರಭಾಕರನಿಗೆ ಮಗಳ ಮದುವೆಯ ಚಿಂತೆ ತಟ್ಟಿತು. ರಾಣಿಯನ್ನು ಕರೆದು "ದೇವಿ! ನಮ್ಮ ಕುಮಾರಿ ರಾಜ್ಯಶ್ರೀ ಬೆಳೆದು, ಅವಳ ಮದುವೆಗೆ ಕಾಲಬಂದಿದೆ. ಅನೇಕಾನೇಕ ಅರಸರು ಅವಳ ಕೈಹಿಡಿಯಲು ಕಾದಿರುವರು. ಆದರೆ ಗುಣಗಳು ಏನಿದ್ದರೂ, ತಿಳಿದವರು ಸದ್ವಂಶದ ಕಡೆಗೆ ಒಲಿಯುವರು. ಈಗ ಇರುವ ರಾಜವಂಶಗಳಲ್ಲಿ ಮೌಖರೀ ವಂಶವೆ ಶ್ರೇಷ್ಠವಾದುದು. ಆ ವಂಶದಲ್ಲಿ ಪ್ರಸಿದ್ಧನಾದ ಅವಂತಿವರ್ಮನ ಹಿರಿಯ ಮಗ ಗ್ರಹವರ್ಮನು ತಂದೆಯಂತೆಯೇ ಗುಣಿ ಅವನು ಕೂಡ ನಮ್ಮ ಮಗಳನ್ನು ಮದುವೆಯಾಗಲು ಉತ್ಸುಕನಾಗಿದ್ದಾನೆ. ನಿನಗೆ ಬೇರೆ ಎಣಿಕೆಗಳಿಲ್ಲದಿದ್ದರೆ ಈ ಸಂಬಂಧವನ್ನು ಒಪ್ಪಬಹುದಷ್ಟೆ?" ಎಂದನು. ರಾಣಿಯು ಒಪ್ಪಿದಳು. ದೊರೆ ತನ್ನ ಹಿರಿಯ ಮಕ್ಕಳೊಡನೆಯೂ ಆಲೋಚಿಸಿದನು. ಅವರೂ ಒಪ್ಪಿದರು.

ಹೀಗೆ ರಾಜ್ಯಶ್ರೀಯನ್ನು ಗ್ರಹವರ್ಮನಿಗೆ ಕೊಡುವುದು ನಿಶ್ಚಯವಾಗಲು, ಗ್ರಹವರ್ಮನ ಕಡೆಯಿಂದ ಬಂದಿದ್ದ ಪ್ರಧಾನದೂತನನ್ನು ಕರೆದು, ಶುಭಮುಹೂರ್ತದಲ್ಲಿ ಕನ್ಯಾದಾನಜಲವನ್ನು ಅರಸನು ಅವನ ಕೈಮೇಲೆ ಹೊಯ್ದನು.

ಪುರಾತನವಾದ ಮೌಖರೀ ಮತ್ತು ಪುಷ್ಪಭೂತಿ ವಂಶಗಳನ್ನು ಒಂದುಮಾಡುವುದಕ್ಕೆ ಕಾರಣವಾದ ರಾಜ್ಯಶ್ರೀ ಗ್ರಹವರ್ಮರ ವಿವಾಹವು ವಿಶೇಷ ವಿಜೃಂಭಣೆಯಿಂದ ಅಸಾಮಾನ್ಯವಾಗಿ ನಡೆಯಿತು. ಸ್ಥಾಣ್ವೀಶ್ವರದ ಆಸ್ಥಾನದ ಬ್ರಾಹ್ಮಣನೊಬ್ಬನು ಹೇಳಿದಂತೆ: ಗ್ರಹವರ್ಮನ ಗುಣಗಳಿಗೆ ಮೆಚ್ಚಿ ಪ್ರಭಾಕರವರ್ಧನನು ಅವನನ್ನು ಎದೆಯ ಮೇಲೆ ಇಟ್ಟುಕೊಂಡಿದ್ದನು; ಈಗ ಅಳಿಯನಾದುದರಿಂದ ಅವನನ್ನು ಶಿವನ ಚಂದ್ರಲೇಖೆಯಂತೆ ತಲೆಯ ಮೇಲಿರಿಸಿಕೊಂಡನು. ತಮ್ಮ ತಂಗಿಯ ಮಾಂಗಲ್ಯಸ್ವರೂಪನಾದ ಗ್ರಹವರ್ಮನನ್ನು ಪ್ರೀತಿಸುವುದರಲ್ಲಿ, ರಾಜ್ಯವರ್ಧನ ಹರ್ಷರು ತಮ್ಮ ತಂದೆತಾಯಿಗಿಂತ ಏನೂ ಕಡಿಮೆಯಾಗಿರಲಿಲ್ಲ.

ಹೀಗೆ ತನ್ನ ಸಹಜ ಸದ್ಗುಣಗಳಿಂದಲೂ, ರಾಜ್ಯಶ್ರೀಯ ವಿವಾಹದಿಂದಲೂ ಎಲ್ಲರ ಪ್ರೀತಿ ವಿಶ್ವಾಸಗಳನ್ನು ಸಂಪಾದಿಸಿದ ಗ್ರಹವರ್ಮನು

ಕೆಲವು ದಿವಸ ಕಳೆದಮೇಲೆ ಪತ್ನೀಸಮೇತನಾಗಿ ತನ್ನ ದೇಶಕ್ಕೆ ತೆರಳಿದನು.

## ಹೂಣರ ಮೇಲೆ ಯುದ್ಧ

ಹೀಗೆಯೇ ಇರಲು, ಹಿಂದೆ ಪ್ರಭಾಕರವರ್ಧನನಿಗೆ ಸೋತು ಸೊಪ್ಪಾಗಿದ್ದ ಹೂಣರು ಪುನಃ ತಲೆಯೆತ್ತಿಕೊಂಡರು. ಅವರ ಗರ್ವವನ್ನು ಅಡಗಿಸಲು ದೊರೆಗೆ ವಯಸ್ಸು ಮೀರಿತ್ತು. ಆದರೆ ರಾಜ್ಯವರ್ಧನನಿಗೆ ಯುದ್ಧಕ್ಕೆ ತೆರಳುವ ವಯಸ್ಸು ಪ್ರಾಪ್ತವಾಗಿತ್ತು. ಅದಕ್ಕಾಗಿ ರಾಜ್ಯವರ್ಧನನಿಗೆ ವೀರಪಟ್ಟ ಕಟ್ಟಿ, ಮಹಾಸೇನೆಯ ಮುಂಭಾಗದಲ್ಲಿಟ್ಟು, ದೊರೆ ಅವನನ್ನು ಹೂಣರ ಮೇಲೆ ಕಳುಹಿಸಿ ಕೊಟ್ಟನು.

ಹರ್ಷನಿಗೆ ಅಣ್ಣನ ಜೊತೆಯಲ್ಲಿ ಯುದ್ಧಕ್ಕೆ ಹೋಗಲು ಆಸೆ. ಆದರೆ ವಯಸ್ಸು ಸಾಲದು. ಆದರೂ ತಾನು ಮಾತ್ರ ಹಿಂದೆ ನಿಲ್ಲಲು ಮನಸ್ಸು ಬಾರದು. ಹೀಗಾಗಿ ಹರ್ಷನು ತಾನೂ ಒಂದು ಕುದುರೆಯೇರಿ ಅಣ್ಣನ ಹಿಂದುಗಡೆ ಉತ್ತರ ದಿಕ್ಕಿಗೆ ನಡೆದನು.

ಹೋಗುವಾಗ ದಾರಿಯಲ್ಲಿ ಹಿಮಾಲಯ ಸಿಕ್ಕಿತು. ಅದರ ಹೊರಮೇರೆಯ ಕಾಡಿನಲ್ಲಿ ಸಂಚರಿಸುತ್ತಿದ್ದ ಸಿಂಹ, ಶರಭ, ಹುಲಿ, ಕರಡಿಗಳನ್ನು ಹರ್ಷನು ಕಂಡನು ಬೇಟೆಯಾಡುವ ಉತ್ಸುಕತೆಯಿಂದ ಪಾಳೆಯವನ್ನು ಬಿಟ್ಟು ಹೊರಟು, ಧನುಸ್ಸು ಹಿಡಿದು ಕೆಲವೇ ದಿನಗಳಲ್ಲಿ ಆ ಕಾಡನ್ನು ಕ್ರೂರಮೃಗಗಳಿಲ್ಲವೆಂಬಂತೆ ಬರಿದು ಮಾಡಿದನು.

## ರಾಜನ ರೋಗವಾರ್ತೆ

ಆ ನಡುವೆ, ಒಂದು ದಿನ ಬೆಳಗಿನ ಜಾವದಲ್ಲಿ, ಹರ್ಷನಿಗೆ ಒಂದು ಕನಸು ಕಾಣಿಸಿತು: ಪ್ರಜ್ವಲಿಸುವ ಕಾಡುಗಿಚ್ಚಿನಲ್ಲಿ ಒಂದು ಸಿಂಹ ಬಿದ್ದು ಉರಿಯುತ್ತಿತ್ತು; ಅದನ್ನು ಕಂಡು ಸಿಂಹಿಯು ಮರಿಗಳನ್ನು ಬಿಟ್ಟು ತಾನೂ ಆ ಬೆಂಕಿಗೆ ಹಾರಿತು. ಹರ್ಷನು ಅದನ್ನು ಕಂಡು "ಮೋಹದ ಸಂಕೋಲೆಯು ಉಕ್ಕಿಗಿಂತಲೂ ದೃಢವಲ್ಲದಿದ್ದರೆ ಆ ಸಿಂಹಿ

ಹಾಗೆ ಬೆಂಕಿಗೆ ಬೀಳುತ್ತಿತ್ತೆ!'' ಎಂದನು. ಆ ವೇಳೆಗೆ ಅವನಿಗೆ ಎಚ್ಚರ ವಾಯಿತು; ಎಡಗಣ್ಣು ಅದುರಿತು, ಮೈ ಏಕೋ ನಡುಗಿತು, ಹೃದಯ ಕಳಚಿದಂತಾಯ್ತು; ಕೊನೆಯಿಲ್ಲದ ಖಿನ್ನತೆ ಆವರಿಸಿಕೊಂಡಿತು. ಅದೇಕೆ ಹಾಗಾಯಿತೆಂದು ಅವನಿಗೆ ತಿಳಿಯಲಿಲ್ಲ ಆ ದಿನವೆಲ್ಲ ಮಂಕು ಹಿಡಿದವ ನಂತೆ ಏನೇನೂ ಯೋಚಿಸುತ್ತಿದ್ದ. ಅಂದಿನ ಬೇಟೆ ಅವನಿಗೆ ರುಚಿಸಲಿಲ್ಲ. ಮಧ್ಯಾಹ್ನದ ವೇಳೆಗೆ ಪಾಳಯಕ್ಕೆ ಹಿಂದಿರುಗಿ ಬಂದು ಮಂಚದ ಮೇಲೆ ಪೆಚ್ಚಾಗಿ ಮಲಗಿಕೊಂಡ. ಬೆಳಿಗ್ಗೆ ಸಂಭವಿಸಿದ ಅಪಶಕುನಗಳು ಏಕಿರಬಹುದೆಂಬ ಭಯ ಅವನನ್ನು ಕಾಡುತ್ತಿತ್ತು.

ಆಗ, ಕುರಂಗಕನೆಂಬ ಆಸ್ಥಾನದ ದೂತನು ದೂರದಲ್ಲಿ ಬರುವುದು ಹರ್ಷನ ಕಣ್ಣಿಗೆ ಬಿತ್ತು. ಕುರಂಗಕನು ಶೋಕದ ಸುದ್ದಿಯನ್ನು ತರ ತಕ್ಕವರು ಧರಿಸತಕ್ಕ ನೀಲಿಬಣ್ಣದ ಉಡುಪು ಹಾಕಿಕೊಂಡಿದ್ದನು ಮೊದಲೇ ಅಪಶಕುನಗಳಿಂದ ಬೆದರಿದ್ದ ಹರ್ಷನ ಎದೆಯು ಆ ದೂತನ ಉಡುಪು ನೋಡಿ ಧಗ್ಗೆಂದಿತು. ಕುರಂಗಕನು ರಾಜಕುಮಾರನಿಗೆ ನಮ ಸ್ಕರಿಸಿ ತಾನು ರಾಜಧಾನಿಯಿಂದ ತಂದಿದ್ದ ಓಲೆಯನ್ನೊಪ್ಪಿಸಿದನು.

ಆ ಓಲೆಯಲ್ಲಿ ಬರೆದಿದ್ದಂತೆ ಪ್ರಭಾಕರವರ್ಧನನು ತೀವ್ರ ರೋಗ ದಿಂದ ಪೀಡಿತನಾಗಿ ಹಾಸುಗೆ ಹಿಡಿದಿದ್ದನು. ಆ ಸುದ್ದಿ ತಿಳಿದು, ತಂದೆ ಯಲ್ಲಿ ಅಪರಿಮಿತವಾದ ಮಮತೆಯನ್ನು ಇಟ್ಟಿದ್ದ ಹರ್ಷನ ಎದೆ ಬಿರಿದ ಹಾಗಾಯಿತು ಕೇಳಿದ ತತ್ಕ್ಷಣ, ತಂದೆಗೆ ಗುಣವಾಗಲೆಂದು ಹಾರೈಸುತ್ತ ಶುದ್ಧಾಚಮನ ಮಾಡಿ, ತನ್ನ ಆಭರಣ ಅಲಂಕಾರಾದಿಗಳನ್ನೆಲ್ಲ ಜೊತೆ ಯಲ್ಲಿದ್ದ ಬ್ರಾಹ್ಮಣರಿಗೆ ದಾನ ಮಾಡಿದನು ಅನಂತರವೇ ಊಟ ಕೂಡ ಮಾಡದೆ ಕುದುರೆಯನ್ನೇರಿ ರಾಜಧಾನಿಗಾಗಿ ಹೊರಟನು. ಅವನ ಅಶ್ವ ದಳವೂ ಅವನ ಹಿಂದೆಯೇ ಅವಸರವಸರವಾಗಿ ಹೊರಟಿತು.

ದಾರಿಯಲ್ಲಿ ಮತ್ತೂ ಕೆಲವು ಅಪಶಕುನಗಳು ಹರ್ಷನಿಗೆ ಕಾಣಿಸಿ ಕೊಂಡವು. ಜಿಂಕೆಗಳು ಬಲದಿಂದ ಎಡಕ್ಕೆ ಓಡಿದುವು; ಕಾಗೆಯೊಂದು ಸೂರ್ಯನ ಕಡೆ ಮುಖ ಮಾಡಿ ಕೂಗಿತು; ಎದುರಿಗೆ ಬೋಳುತಲೆಯ ಬೆತ್ತಲೆಮೈಯ ಜೈನನೊಬ್ಬನು ಬಂದ. ರಾಜಧಾನಿಯಲ್ಲಿ ರೋಗ ಗ್ರಸ್ತನಾದ ಆ ರಾಜಸಿಂಹನ ಮರಣಕಾಲಕ್ಕೆ ಸೂಚಕಗಳಾದ ಶಕುನ

ಗಳನ್ನು ಕಂಡ ಕುಮಾರನು, ಆದಷ್ಟು ಬೇಗ ತನ್ನ ತಂದೆಯನ್ನು ಕಾಣಬೇಕೆಂದು ತವಕಪಡುತ್ತ, ಅನೇಕ ದಿನಗಳಲ್ಲಿ ಮಾಡತಕ್ಕ ದೀರ್ಘ ಪ್ರಯಾಣವನ್ನು ಒಂದೇ ದಿನದಲ್ಲಿ ಮುಗಿಸಿ, ಮಾರನೆಯ ಮಧ್ಯಾಹ್ನ ಸ್ಥಾಣ್ವೀಶ್ವರಕ್ಕೆ ಬಂದನು.

ಹರ್ಷನು ರಾಜಧಾನಿಗೆ ಬಂದಾಗ ಪಟ್ಟಣದ ಜೀವವೇ ಹೋದ ಹಾಗಿತ್ತು. ಕುಮಾರನು ಅಲ್ಲಿಯ ಶ್ಮಶಾನಮೌನವನ್ನು ಸಹಿಸಲಾರದೆ ಬೇಗನೆ ಅರಮನೆಯ ಕಡೆ ಸಾಗಿದನು. ಅರಮನೆಯ ಬಾಗಿಲ ಬಳಿ ಸುಷೇಣನೆಂಬ ವೈದ್ಯನು ಹರ್ಷನ ಪ್ರಶ್ನೆಗೆ ಉತ್ತರವಾಗಿ ''ಮಹಾರಾಜನ ಸ್ಥಿತಿ ಒಂದೇ ಸಮವಾಗಿದೆ. ನಿನ್ನನ್ನು ಕಂಡು ಉತ್ತಮಗೊಳ್ಳಬಹುದು" ಎಂದನು.

ಹರ್ಷನು, ಅರಮನೆಯೊಳಗೆ ದೊರೆಯ ಆರೋಗ್ಯಕ್ಕಾಗಿ ಬ್ರಾಹ್ಮಣರು ನಡೆಸುತ್ತಿದ್ದ ತೆರತೆರನಾದ ಪೂಜೆಯನ್ನೂ, ದೊರೆಯ ದರ್ಶನವಿಲ್ಲದೆ ಮ್ಲಾನಮುಖರಾಗಿ ಕುಳಿತಿದ್ದ ರಾಜರನ್ನೂ, ದೊರೆಯ ಸ್ಥಿತಿಗೆ ದುಃಖಿತ ರಾಗಿ ಕುಗ್ಗಿಹೋಗಿದ್ದ ಭೃತ್ಯಪರಿವಾರವನ್ನೂ ನೋಡುತ್ತ, ಅವರ ದೃಷ್ಟಿಯನ್ನು ದಾಟಿ ಅರಮನೆಯ ಮೂರನೆಯ ಅಂಗಳಕ್ಕೆ ಬಂದನು. ಅರಸನಿಗೆ ಬೇಕಾದ ಔಷಧೋಪಚಾರಗಳನ್ನು ಅಲ್ಲಿ ತಯಾರಿಸುತ್ತಿದ್ದರು. ಅದರ ಆಚೆ ಇದ್ದ ಧವಳಗೃಹದಲ್ಲಿಯೇ ದೊರೆ ಮಲಗಿದ್ದುದು.

## ರಾಜದರ್ಶನ

ಧವಳಗೃಹದಲ್ಲಿ ದೊರೆ ಮಲಗಿದ್ದನು. ವೈದ್ಯರು ತಮ್ಮ ಬುದ್ಧಿ ಯನ್ನೆಲ್ಲ ಉಪಯೋಗಿಸಿ, ಅರಸನ ಬೇನೆಯನ್ನು ತೊಲಗಿಸಲು ಯತ್ನಿಸು ತ್ತಿದ್ದರು. ಅಮಾತ್ಯರು, ಆಪ್ತರು, ರಾಜಸೇವಕರು ಮುಂತಾದವರು ಏನು ಮಾಡಬೇಕೆಂದು ತೋಚದೆ ಪೇಚಾಡುತ್ತಿದ್ದರು. ಯಶೋ ವತಿಯು ಅರಸನ ಬಳಿ ಕುಳಿತು ಗಾಳಿ ಬೀಸುತ್ತಿದ್ದಳು; ಅತ್ತು ಅತ್ತು ಅವಳ ಕಣ್ಣು ಕೆಂಪಗಾಗಿತ್ತು. ಅಲ್ಲಿಯ ಮೌನವನ್ನು ನೋಡಿದರೆ— ರಾಜನು ಆಗಲೆ ಮೃತನಾಗಿ, ದೇಹ ಬಿಟ್ಟ ಅವನ ಚೇತನವು ಮಿಕ್ಕವರ ಚೈತನ್ಯವನ್ನೂ ತನ್ನ ಜೊತೆಯಲ್ಲಿ ಎಳೆದುಕೊಂಡು ಹೋದ ಹಾಗಿತ್ತು.

ಮೊದಲೇ ಬೆದರಿ ಭಯಗೊಂಡಿದ್ದ ಹರ್ಷನಿಗೆ ರಾಜನ ಸ್ಥಿತಿ ನೋಡಿ ಸ್ಮೃತಿ ತಪ್ಪುವಂತಾಯಿತು. ತನ್ನಂತಹ ವೀರನಿಗಿರಬೇಕಾದ ಸ್ಥೈರ್ಯವನ್ನು ತಂದೆಯ ಮೇಲಿನ ವಿಪರೀತವಾದ ಮೋಹಕ್ಕೆ ಬಲಿಗೊಟ್ಟು, ಹರ್ಷನು ಮೂರ್ಛಿತನಾದನು.

ಪ್ರಭಾಕರವರ್ಧನನು ಹರ್ಷನು ಬಂದುದನ್ನು ಕಂಡು, ಕೈಲಾಗದಿದ್ದರೂ ಮಂಚದಿಂದ ಅರ್ಧ ಮೇಲೆದ್ದು "ಬಾ, ಹರ್ಷ! ಬಾ!" ಎಂದು ಕೈನೀಡಿ ಕರೆದನು. ಹರ್ಷನು ಭಯಭಕ್ತಿಯಿಂದ ತಂದೆಯನ್ನು ಸಾರಿದನು. ಮಹಾರಾಜನು ಮಗನನ್ನು ಬರಸೆಳೆದು ಬಿಗಿಯಪ್ಪಿದನು. ತಂದೆಯು ಬಿಟ್ಟುಕೊಟ್ಟನಂತರ ಹರ್ಷನು ತಾಯಿಗೆ ನಮಸ್ಕರಿಸಿ, ತಂದೆಯ ಮಂಚದ ಬಳಿ ಕುಳಿತನು. ಪ್ರಭಾಕರನು ಅವನನ್ನು ಕಣ್ಣುಗಳಿಂದ ಕುಡಿದುಬಿಡುವಂತೆ ನೋಡುತ್ತ "ನೀನು ಬಹಳ ಇಳಿದುಹೋಗಿದ್ದೀಯೆ, ಕಂದ!" ಎಂದು ಕಷ್ಟದಿಂದ ನುಡಿದನು. ಹರ್ಷನು ಆಹಾರ ಮುಟ್ಟಿ ಮೂರು ದಿನವಾಯಿತೆಂದು ಭಣ್ಡಿ ತಿಳಿಸಿದನು ತಂದೆಯು ಕುಮಾರನ ಪಿತೃಪ್ರೇಮಕ್ಕೆ ಮೆಚ್ಚಿ "ಕಂದ, ನಿನ್ನ ಪ್ರೇಮವನ್ನೂ ನಿನ್ನ ಎಳೆಗರುಳನ್ನೂ ನಾನು ಬಲ್ಲೆ. ಸುಮ್ಮನೆ ದುಃಖಿಸಬೇಡ, ಹರ್ಷ. ನೀನು ನನ್ನ ಮಗನಾದುದರಿಂದ ನನ್ನ ಜನ್ಮ ಸಾರ್ಥಕವಾಯಿತು, ಪಡೆಯಬೇಕಾದುದನ್ನು ನಾನು ಪಡೆದುದಾಯಿತು. ನನ್ನ ಪ್ರಜೆಗಳೂ ಹೀಗೆಯೇ ಹೇಳುವರು. ಅದರಿಂದ ನಾನು ಸತ್ತರೆ ದುಃಖವಿಲ್ಲ. ವೈದ್ಯರಲ್ಲಿರುವ ಗೌರವದಿಂದ ನಾನು ಅವರ ಔಷಧಗಳನ್ನು ಕುಡಿಯುತ್ತಿದ್ದೇನೆ. ನಿನ್ನಂತಹ ರಾಜಪುತ್ರನು ಜನಿಸುವುದು ಒಂದು ಜನಪದದ ಪೂರ್ವಸಂಚಿತ ಪುಣ್ಯ! ನಿನ್ನಂತಹವರ ಜನನಕ್ಕೆ ನಾವು ನಿಮಿತ್ತಮಾತ್ರರು, ಅಷ್ಟೆ. ಆದುದರಿಂದ ನನಗಾಗಿ ನೀನು ದುಃಖಪಡಬೇಡ ನೀನು ನಿನ್ನವನಲ್ಲ, ನೀನು ನಿನ್ನ ರಾಜ್ಯದ ಪ್ರಜೆಗಳವನು. ಆದುದರಿಂದ ಜೀವಿಸಿರುವುದಕ್ಕೆ ಮಾಡಲೇಬೇಕಾದ ಊಟವನ್ನು ಮುಗಿಸು. ಇಲ್ಲದೆ ಹೋದರೆ, ನೀನು ಊಟ ಮಾಡಿದ ಹೊರತು ನಾನೂ ಮಾಡುವುದಿಲ್ಲ" ಎಂದನು.

## ರಸಾಯನನ ಅಗ್ನಿಪ್ರವೇಶ

ಹರ್ಷನು ತಂದೆಯ ಬಲವಂತಕ್ಕಾಗಿ ಊಟ ಮಾಡಲು ಹೊರಟನು. ಊಟ ಸೇರಲೊಲ್ಲದು, ಗಂಟಲಲ್ಲ ಸಿಕ್ಕಿದಂತಾಗುವುದು; ಆದರೂ ತಂದೆಯ ಮಾತನ್ನು ಮೀರಲಾರದೆ ಕೆಲವು ತುತ್ತು ನುಂಗಿದನು. ತುತ್ತುತುತ್ತಿಗೂ ನಡುವೆ ದೊರೆಯ ಸ್ಥಿತಿಯನ್ನು ತಿಳಿದು ಬರಲು ದೂತರನ್ನು ಅಟ್ಟುವನು. ಅವರು ಬಂದು ದೊರೆಯ ಸ್ಥಿತಿಯಲ್ಲಿ ಏನೂ ಬದಲಾವಣೆಯಿಲ್ಲವೆಂದು ಹೇಳುವರು.

ಹೀಗೆ ಕಾಟದ ಊಟ ಮುಗಿಯಲು, ಹರ್ಷನು ಸಂಜೆಯವೇಳೆಗೆ ಆಸ್ಥಾನ ವೈದ್ಯರನ್ನೆಲ್ಲ ಏಕಾಂತವಾಗಿ ಕರೆದು ದೊರೆಯ ರೋಗದ ಸುದ್ದಿಯನ್ನು ಎತ್ತಿದನು ವೈದ್ಯರು ಏಕಕಂಠವಾಗಿ, "ಕುಮಾರ! ಭಯ ಬೇಡ. ಕೆಲವು ದಿನಗಳಲ್ಲ ಮಹಾರಾಜನು ಎಂದಿನಂತೆ ಗುಣಮುಖವಾಗಿ ಪೂರ್ವದ ಸ್ಥಿತಿಗೆ ಬರುವನು" ಎಂದು ಸಾಂತ್ವವಚನಗಳನ್ನು ನುಡಿದರು.

ಆದರೆ, ಆ ವೈದ್ಯರಲ್ಲಿ ಒಬ್ಬನಾದ ರಸಾಯನನೆಂಬ ಹದಿನೆಂಟು ವರುಷದ ಯುವಕ ಮಾತ್ರ ಮಿಕ್ಕವರ ಮಾತಿಗೆ ತನ್ನ ದನಿ ಕೂಡಿಸಲಿಲ್ಲ. ಆಸ್ಥಾನದಲ್ಲಿನ ಅವನ ವೈದ್ಯವೃತ್ತಿಯು ವಂಶಪಾರಂಪರ್ಯವಾಗಿ ಬಂದುದು. ದೊರೆ ಅವನನ್ನು ತನ್ನ ಸ್ವಂತ ಮಗನಂತೆಯೇ ಬೆಳೆಸಿದ್ದನು. ಅವನು ಆಯುರ್ವೇದವನ್ನು ಪರಿಪೂರ್ಣವಾಗಿ ಕರಗತಮಾಡಿಕೊಂಡಿದ್ದನು. ಸಹಜವಾಗಿಯೇ ಮೇಧಾವಿಯಾದ ರಸಾಯನನಿಗೆ ದೊರೆಯ ದೇಹದ ನಿಜಸ್ಥಿತಿ ತಿಳಿದಿತ್ತು. ಅವನು ಏನೂ ಮಾತನಾಡದೆ ಕಣ್ಣಿನಲ್ಲಿ ನೀರಿಟ್ಟು ತಲೆ ತಗ್ಗಿಸಿ ನಿಂತಿದ್ದನು. ಹರ್ಷನು ಅವನಕಡೆ ನೋಡಿದನು. ಅವನ ನುಡಿಯದ ಪ್ರಶ್ನೆಗೆ ಉತ್ತರವಾಗಿ ರಸಾಯನನು "ದೇವ! ನಾಳೆಯ ಬೆಳಿಗ್ಗೆ ಈ ರೋಗವನ್ನು ಯಥಾಸ್ಥಿತಿಯಾಗಿ ತಿಳಿಸುವೆನು" ಎಂದನು.

ಹರ್ಷನು ಅಂದಿನ ರಾತ್ರಿಯನ್ನು ದೊರೆಯ ಮಂಚದ ಬಳಿಯೇ ಕಳೆದನು. ಜ್ವರದ ತಾಪಕ್ಕೆ ದೊರೆ ಅನುಭವಿಸುವುದನ್ನು ನೋಡಲಾರದೆ ನೋಡುತ್ತ, ಬೆಳಗಾಗಲು ಸ್ವಗೃಹಕ್ಕೆ ಬಂದು, ರಾಜ್ಯವರ್ಧನ

ನನ್ನು ಕರೆತರಲು ಶೀಘ್ರಗಾಮಿಗಳನ್ನು ಕುದುರೆಗಳ ಮೇಲೂ ಒಂಟೆಗಳ ಮೇಲೂ ಅಟ್ಟಿದನು. ಅಟ್ಟಿ, ತನ್ನ ಪ್ರಾತಃಕರ್ಮಗಳನ್ನು ಮುಗಿಸಿ ಬಂದ ಕುಮಾರನ ಕಿವಿಗೆ 'ರಸಾಯನ! ರಸಾಯನ!' ಎಂದು ಸುತ್ತಿನ ರಾಜಕುಮಾರರು ಆಡುತ್ತಿದ್ದುದು ಕೇಳಿಸಿತು. ರಸಾಯನನ ಸುದ್ದಿ ಅದೇನೆಂದು ಕೇಳಲು, ರಸಾಯನನು ಅಗ್ನಿಪ್ರವೇಶ ಮಾಡಿದನೆಂದು ಅವರು ಹೇಳಲಾರದ ಸುದ್ದಿ ಹೇಳಿದರು. ಕುಮಾರನಿಗೆ ಸಿಡಿಲು ಬಡಿದಂತಾಯಿತು. ಅಸ್ಥಿರನಾಗಿ "ಆಹಾ! ಇಂತಹ ಸತ್ಪುರುಷರು ಪರರಿಗೆ ಅಹಿತವಾದುದನ್ನು ಎಂದೂ ಆಡರು. ಮಹಾರಾಜನು ಅವನನ್ನು ತನ್ನ ಮಗನಂತೆ ಕಾಣುತ್ತಿದ್ದನು. ಇಂತಹ ತಂದೆಯ ಆರೋಗ್ಯವನ್ನು ಕುರಿತು ಅಮಂಗಳವನ್ನು ನುಡಿಯುವುದಕ್ಕಿಂತ ಮರಣವೇ ಮೇಲೆಂದು ರಸಾಯನನು ಅಗ್ನಿಪ್ರವೇಶ ಮಾಡಿದನು. ಅವನು ಸತ್ತು ಸುಖಿಯಾದನು. ನನಗೇಕೆ ಸಾವು ಬರದು? ನನ್ನ ಎದೆಯೇಕೆ ನೂರು ಚೂರಾಗಿ ಸಿಡಿದು ಹೋಗದು!" ಎಂದು ಹಲುಬುತ್ತ, ಮಂಚದ ಮೇಲೆ ಬಿದ್ದುಕೊಂಡು ಹೊದಿಕೆಯಲ್ಲಿ ಮುಖ ಮುಚ್ಚಿಕೊಂಡನು.

## ಯಶೋವತಿಯ ಅಗ್ನಿಪ್ರವೇಶ

ಕುಮಾರನು ಆ ರಾತ್ರೆ ಅಲ್ಲ ಹಾಗೆಯೇ ಮಲಗಿದ್ದನು. ದೊರೆಯ ಸ್ಥಿತಿ ಕೊಂಚವೂ ಉತ್ತಮವಾಗಲಿಲ್ಲ. ಹಿಮಾಲಯದ ಕಾಂತಾರವನ್ನು ಬಿಟ್ಟ ವೇಳೆಯಿಂದ ಹರ್ಷನನ್ನು ಕಾಡುತ್ತಿದ್ದ ದುರ್ನಿಮಿತ್ತಗಳು ಆ ರಾತ್ರೆ ಹೊಸಹೊಸ ರೂಪ ತಾಳಿ ಬಂದು ಅವನ ಹೃದಯವನ್ನು ನಡುಗಿಸಿದುವು. ಹಾಗೂ ಹೀಗೂ ರಾತ್ರೆ ಕಳೆದು ಬೆಳಗಾಯಿತು. ಆಗ, ಯಶೋವತಿಯ ಮುಖ್ಯ ಪರಿಚಾರಿಕೆಯಾದ ಮಾಲಾ ಎಂಬವಳು ಕುಮಾರನನ್ನು ಹುಡುಕುತ್ತ ಓಡಿಬಂದು "ದೇವ! ಮಹಾರಾಜನು ಜೀವಿಸಿದ್ದರು ಕೂಡ, ಮಹಾರಾಣಿಯು ಅಗ್ನಿಪ್ರವೇಶ ಮಾಡುವಳಂತೆ! ಬಂದು ಕಾಪಾಡಬೇಕು" ಎಂದು ಗೋಳಾಡುತ್ತ ಅರಿಕೆಮಾಡಿಕೊಂಡಳು

ಅತ್ತ ತಂದೆ ಮೃತ್ಯುಮುಖನಾಗಿ ಮಲಗಿದ್ದನು. ಇತ್ತ ಸೋದರನಂತಿದ್ದ ರಸಾಯನನು ಅಗ್ನಿಪ್ರವೇಶಮಾಡಿದನು. ಇದ್ದ ಮೇಲೆ ನಾಲ

ದೆಂಬಂತೆ ಮೇಲೆ ಹಾರಿಬಂದ ರಾಣಿಯ ನಿಶ್ಚಯವನ್ನು ಕೇಳಿ ಹರ್ಷ ನಿಗೆ ಜೀವವೇ ಹೋದಂತಾಯಿತು. ತಟಕ್ಕನೆ ಎದ್ದು ತ್ವರೆಯಿಂದ ತಾಯಿಯ ಅಂತಃಪುರವನ್ನು ಪ್ರವೇಶಿಸಿದನು. ಯಶೋವತಿಯು ಸ್ನಾನ ಮಾಡಿ ಶುಚಿಯಾಗಿ, ಅರಿಸಿನ ಕುಂಕುಮಗಳಿಂದ ಅಲಂಕರಿಸಿಕೊಂಡು, ತನ್ನ ಆಭರಣ ಅಲಂಕಾರಗಳನ್ನೆಲ್ಲ ಸುತ್ತಿನ ಭೃತ್ಯರಿಗೆ ಹಂಚಿಕೊಟ್ಟು, ಬೀಳ್ಕೊಡಬೇಕಾದವರನ್ನೆಲ್ಲ ಬೀಳ್ಕೊಟ್ಟು, ಮುತ್ತೈದೆ ಸಾವನ್ನು ಸಾಧಿಸಲು ಸಜ್ಜಾಗಿದ್ದಳು. ಅವಳ ಸ್ಥೈರ್ಯವನ್ನು ಕಂಡು ಹರ್ಷನು ದುಃಖದ ಆಧಿಕ್ಯದಿಂದ ಏನು ಹೇಳಲೂ ತೋಚದೆ "ನನ್ನನ್ನು ಹೀಗೆ ಬಿಟ್ಟು ಹೋಗಲು ನಾನೇನು ಅಪರಾಧ ಮಾಡಿದೆನು, ತಾಯಿ?" ಎಂದು ಕೂಗುತ್ತ ಅವಳ ಪಾದಗಳ ಬಳಿ ಮೂರ್ಛಿತನಾದನು.

ಮಗನ ಅವಸ್ಥೆಯನ್ನು ಕಂಡು, ಯಶೋವತಿಯು ತನ್ನ ದುಃಖವನ್ನು ಹಿಡಿತಕ್ಕೆ ತಂದುಕೊಂಡು, ಅವನನ್ನು ಎಬ್ಬಿಸಿ, "ನಿನ್ನನ್ನು ನಾನು ಪ್ರೀತಿಸೆನೆ, ಕಂದ? ನನ್ನ ಎದೆಹಾಲಿನೊಡನೆಯೇ ನನ್ನ ಎದೆಯೂ ನಿನ್ನದಾಯಿತು. ಕಂದ, ನಾನು ಸನಾತನವಾದ ಸತ್ಕುಲದಲ್ಲಿ ಹುಟ್ಟಿದೆನು. ನಿನ್ನ ತಂದೆಯಂತಹ ಮಹಾರಾಜಾಧಿರಾಜನ ಕೈಹಿಡಿದೆನು. ನಿನ್ನಂತಹ ಪುತ್ರರನ್ನು ಪಡೆದೆನು. ಜೀವನದಲ್ಲಿ ಏನೇನು ಪಡೆಯಬೇಕು, ಮಿಕ್ಕವರು ಏನು ಪಡೆಯಲಾರರು, ಅದೆಲ್ಲವನ್ನೂ ನಾನು ಪಡೆದೆನು. ಮಾಡತಕ್ಕುದನ್ನೆಲ್ಲ ಮಾಡಿದೆನು. ಇನ್ನೇನು? ಇಂತಹ ಸ್ಥಿತಿಯಲ್ಲಿ ಇನ್ನೂ ಮುತ್ತೈದೆಯಾಗಿರುವಾಗಲೆ ಈ ಲೋಕದಿಂದ ತೆರಳಿ, ಮಹಾರಾಜನ ಆಗಮನವನ್ನು ಪರಲೋಕದಲ್ಲಿ ಮುಂದಾಗಿ ತಿಳಿಸಬೇಕೆಂದಿರುವೆನು. ಈ ನನ್ನ ಇಷ್ಟಕ್ಕೆ ಎದುರಾಗಿ ನನ್ನನ್ನು ಅವಮಾನಿಸಬೇಡ, ಕಂದ!" ಎಂದು ಸಮಾಧಾನಪಡಿಸಿದಳು.

ಯಶೋವತಿಯಂತಹವರಿಗೆ ಸುಮಂಗಲಿಯ ಸಾವೇ ತಕ್ಕುದೆಂದು ಹರ್ಷನಿಗೂ ಎನಿಸಿತು. ಅಲ್ಲದೆ ಅವಳ ದೃಢನಿಶ್ಚಯಕ್ಕೆ ಏನೂ ಬದುಲು ಹೇಳಲು ಅಶಕ್ತನಾಗಿ ಮೌನದಿಂದ ದುಃಖಿಸುತ್ತ ನಿಂತನು. ಯಶೋವತೀ ದೇವಿ ಹೀಗೆ ಮಗನನ್ನು ಒಪ್ಪಿಸಿ, ಅವನನ್ನು ತಬ್ಬಿಕೊಂಡು ಮುದ್ದಿಸಿ,

ಗೋಳಿಡುವ ಪರಿಜನ ಪರಿವಾರದೊಡನೆ ಸರಸ್ವತೀ ನದಿಯ ತೀರಕ್ಕೆ ನಡೆದಳು. ಅಲ್ಲಿ ಪ್ರಜ್ವಲಿಸುತ್ತಿದ್ದ ಅಗ್ನಿಯನ್ನು ಆರಾಧಿಸಿ, ರಾಣಿಯು ಏಕಮನಸ್ಸಿನಿಂದ ಅಗ್ನಿಪ್ರವೇಶವನ್ನು ಆಚರಿಸಿದಳು.

## ಮಹಾರಾಜನ ಮರಣ

ರಾಣಿಯ ಅಗ್ನಿಪ್ರವೇಶಕ್ಕೆ ಜೊತೆಯಲ್ಲಿ ಬಂದಿದ್ದ ಬಂಧುವರ್ಗದವರು, ಚೈತನ್ಯಹೀನನಾದ ಹರ್ಷನನ್ನು ಅರಮನೆಗೆ ಕರೆತಂದರು. ಹರ್ಷನು ನೇರಾಗಿ ಬಂದು ತನ್ನ ತಂದೆಯ ಕಾಲುಹಿಡಿದುಕೊಂಡು ಮಲಗಿದನು. ಅದುವರೆಗೆ ಅದುಮಿ ಅದುಮಿ ಒಳಗೆ ನಿಲ್ಲಲಾರದೆ ಉಕ್ಕುತ್ತಿದ್ದ ದುಃಖವು ತಂದೆಯ ಸಾಮೀಪ್ಯದಿಂದ ಥಿಲ್ಲನೆ ಹೊರಚೆಲ್ಲಿತು. ಹರ್ಷನು ಧಾರಾಕಾರವಾಗಿ ಕಣ್ಣೀರು ಸುರಿಸುತ್ತ, ಸಾಮಾನ್ಯರಂತೆ ಬಿಕ್ಕಿ ಬಿಕ್ಕಿ ಅಳತೊಡಗಿದನು !

ಅವನ ಅಳು ಕೇಳಿ ದೊರೆಗೆ ಎಚ್ಚರವಾಯಿತು. ಮಗನಿಗೆ ಸಮಾಧಾನ ಹೇಳುತ್ತ, ಅರಸನು “ಕುಮಾರ, ನೀನು ಹೀಗಾಡಬಾರದು. ನಿನ್ನಂತಹವರಿಗೆ ಸ್ಥೈರ್ಯವೇ ಸರ್ವಸ್ವ. ಬಂದ ಎಡರುಗಳನ್ನು ಮೆಟ್ಟಿ ಮೇಲೆದ್ದು ಅಚಲಿತರಾಗಿರುವುದು ಮಾನವರಿಗೆ ಮುಖ್ಯ ಗುಣ ; ಅದರಲ್ಲಿಯೂ ದೊರೆಗಳಿಗೆ ಅದು ರಕ್ತದಲ್ಲಿ ಬೆರೆತುದು. ಸ್ಥಿರಹೃದಯರ ಸೇನೆಗೆ ನಾಯಕನಾದ ನಿನಗೆ ಅಸ್ಥಿರತೆ ಬರಲಾಗದು. ಕಂದ, ನೀನು ನಮ್ಮ ವಂಶದ ಹಿರಿಬೆಳಕು. ನೀನು ಪುರುಷಸಿಂಹ ಈ ಸಮಸ್ತ ಪೃಥ್ವಿ ನಿನ್ನದು. ವೀರಶ್ರೀ ವಿಜಯಲಕ್ಷ್ಮಿಯರನ್ನು ಸಾಧಿಸು. ಈ ಲೋಕಕ್ಕೆ ನೀನೇ ಉತ್ತರಾಧಿಕಾರಿ. ನನ್ನ ಕೋಶವನ್ನು ಸ್ವೀಕರಿಸು. ಸಾಮಂತ ರಾಜರು ನಿನ್ನವರಾಗಲಿ. ರಾಜ್ಯಭಾರವನ್ನು ಹೊರುವವನು ನೀನೆ. ಪ್ರಜೆಗಳನ್ನು ಚೆನ್ನಾಗಿ ಕಾಪಾಡು. ಪರಿಜನರನ್ನು ಪರಿಪಾಲಿಸು. ಶಸ್ತ್ರಾಭ್ಯಾಸವು ನಿನ್ನ ಕಾರ್ಯವಾಗಲಿ. ಚಾಪಲ್ಯವನ್ನು ನಿಗ್ರಹಿಸು, ಶತ್ರುಶೇಷವನ್ನು ಉಳಿಸಬೇಡ” ಎಂದು ಕುಗ್ಗಿದ ದನಿಯಲ್ಲಿ ಉಸುರಿದನು. ಅದೆ ದೊರೆಯ ಕಡೆಯ ಉಸಿರಾಯಿತು. ಮಹಾರಾಜಾಧಿರಾಜ ಪ್ರಭಾಕರವರ್ಧನನು ಮೃತನಾದನು.

## ಹರ್ಷನ ಕಾತರ

ರಾಜನ ಸಾವಿನ ಸುದ್ದಿ ನಾಡೆಲ್ಲ ಹರಡಿತು. ತಮಗೆ ಎರಡನೆಯ ತಂದೆಯಂತಿದ್ದ ಮಹಾರಾಜನು ಮೃತನಾದುದನ್ನು ತಡೆಯಲಾರದೆ ಕೆಲವರು ಬೆಟ್ಟದ ಮೇಲಿಂದ ಬಿದ್ದು ಪ್ರಾಣಬಿಟ್ಟರು. ಕೆಲವರು ಪುಣ್ಯಕ್ಷೇತ್ರಗಳಿಗೆ ಹೋದರು, ಕೆಲವರು ದರ್ಭಶಯನದಲ್ಲಿ ಮಲಗಿ ಊಟ ಬಿಟ್ಟರು, ಅಗ್ನಿಪ್ರವೇಶಮಾಡಿ ದುಃಖದ ಬೆಂಕಿಯನ್ನು ಮರೆಯಿಸಿದರು ಕೆಲರು; ಇನ್ನು ಕೆಲವರು ಮೌನವ್ರತವನ್ನು ಅವಲಂಬಿಸಿ ಕಾಡಿಗೆ ಓಡಿಹೋದರು, ಮತ್ತೂ ಕೆಲವರು ರಾಜ್ಯವನ್ನು ತೊರೆದು ಸಂನ್ಯಾಸಿಗಳಾದರು. ಹೀಗೆ ಪೌರರು ನಾನಾ ರೀತಿಗಳಲ್ಲಿ ತಮ್ಮ ನಾಯಕ ವಿಯೋಗದುಃಖವನ್ನು ಮರೆಯಲು ಯತ್ನಿಸುತ್ತಿದ್ದರು.

ಇತ್ತ ಹರ್ಷನು ಕೂಡ, ತಂದೆಯ ಅಂತಿಮವಾಕ್ಯಗಳಿಗೆ ವ್ಯತಿರೇಕವಾಗಿ ಇನ್ನೂ ದುಃಖಿಸುತ್ತಲೇ ಇದ್ದನು. ಇಹಲೋಕದ ಯೋಚನೆಯನ್ನು ಮರೆತು, ಸಾವಿನ ಕಡೆಗೇ ಅವನ ಮನಸ್ಸು ಓಡುತ್ತಿತ್ತು. ಆದರೆ ರಾಜ್ಯದ ಮಂತ್ರಿಮುಖ್ಯರು, ಪುರೋಹಿತರು, ಅನೇಕ ಋಷಿಗಳು ಮೊದಲಾದವರ ಹಿತವಚನಗಳಿಂದ ಹರ್ಷನ ದುಃಖದ ಆವೇಶ ಕೆಲವು ದಿನಗಳಲ್ಲಿಯೇ ಇಳಿಯಿತು. ತೀರ ಆವಶ್ಯಕವಾದ ನಿದ್ರಾಹಾರಗಳ ಕಡೆಗೆ ಅವನ ಗಮನ ತಿರುಗಿತು

ಆಗಾಗ್ಗೆ ಅವನ ಗಮನ ಹೂಣರಮೇಲೆ ನಡೆದಿದ್ದ ಅಣ್ಣನ ಕಡೆಗೂ ತಿರುಗುತ್ತಿತ್ತು. ತಂದೆ ಬದುಕಿದಾಗಲೇ ಹರ್ಷನು ರಾಜ್ಯವರ್ಧನನಿಗೆ ಓಲೆಯಟ್ಟಿದನಷ್ಟೆ, ಅದು ತಲುಪಿ ಅವನು ಎಂದು ಬಂದಾನು—ಎಂದು ಹರ್ಷನು ದಾರಿನೋಡುತ್ತಿದ್ದನು. ಪ್ರಭಾಕರವರ್ಧನನು ಸಾಯುವ ಮುಂಚೆ ಹರ್ಷನಿಗೆ ನುಡಿದ ಮಾತುಗಳನ್ನು ನೋಡಿದರೆ, ಹರ್ಷನೇ ತನಗೆ ಉತ್ತರಾಧಿಕಾರಿಯಾಗಿ ಪಟ್ಟವೇರಬೇಕೆಂದು ಅವನ ಆಸೆಯಿದ್ದಂತೆ ಕಾಣುವುದು. ಆದರೆ ಹರ್ಷನಿಗೆ ಪಟ್ಟವೇರುವ ಆಸೆ ಎಳ್ಳಷ್ಟೂ ಇರಲಿಲ್ಲ. ರಾಜ್ಯವರ್ಧನನು ಹಿಂದಿರುಗಿ ಬರುವುದನ್ನೇ ಕಾತರನಾಗಿ ಕಾಯುತ್ತ "ದೇವರೆ, ನನ್ನ ಅಣ್ಣನು ಹಿಂದಿರುಗಿ ಬಂದು, ತಂದೆಯ

ಸಾವಿನಿಂದ ವಿರಕ್ತನಾಗಿ ಸಂನ್ಯಾಸಿಯಾಗದಿರಲಿ! ನಾರುಮುಡಿ ತೊಡದಿರಲಿ! ಆಶ್ರಮ ಗಿರಿಗುಹೆಗಳನ್ನು ಆಶ್ರಯಿಸದಿರಲಿ! ತನ್ನ ದುಃಖವನ್ನು ನುಂಗಿಕೊಂಡು ಆ ಪುರುಷಸಿಂಹನು ಪ್ರಪಂಚವು ನಶ್ವರವೆನ್ನದೆ ಈ ಭೂಭಾರವನ್ನು ತಾಳಲಿ! ರಾಜ್ಯಾಭಿಷೇಕದ ಜಲದಲ್ಲ ತನ್ನ ಶೋಕಾಗ್ನಿಯನ್ನು ಆರಿಸಲಿ! ಈ ದೊರೆಗಳಿಗೆಲ್ಲ ಅಧಿನಾಯಕನಾಗಲಿ! ಆಹಾ! ಗತಿಸಿದ ಮಹಾರಾಜನಂತಹವರು ಬೇರೆ ಯಾರೂ ಇಲ್ಲವೆಂದು ಆತನು ಎಷ್ಟು ಬಾರಿ ಹೊಗಳಿ ಹಿಗ್ಗುತ್ತಿದ್ದನು! ಆ ಮಹಾರಾಜನ ರಾಜ್ಯಭಾರವನ್ನು ಅಣ್ಣ ರಾಜ್ಯವರ್ಧನನು ಒಲ್ಲೆನೆನ್ನದೆ ವಹಿಸಲಿ, ದೇವಾ!'' ಎಂದು ಹರ್ಷನು ಅಹರ್ನಿಶಿಯೂ ಹಾರೈಸುತ್ತಿದ್ದನು.

## ರಾಜ್ಯವರ್ಧನನ ಆಗಮನ

ದೊರೆಯ ಅಂತಿಮಕ್ರಿಯೆಗಳೆಲ್ಲ ಮುಗಿದು ಸೂತಕದ ದಿನಗಳು ಕಳೆದುವು ಆ ವೇಳೆಗೆ ಹರ್ಷನಟ್ಟಿದ್ದ ಓಲೆ ರಾಜ್ಯವರ್ಧನನಿಗೆ ತಲುಪಿ ಅವನು ರಾಜಧಾನಿಗೆ ಹಿಂದಿರುಗಿದನು. ಬಂದವನು ಪರಿವಾರ ಹೀನನಾಗಿ ಒಬ್ಬಿಬ್ಬರು ಸೇವಕರೊಡನೆ ಮಾತ್ರ ಬಂದನು. ದೂರದ ಪ್ರಯಾಣದಿಂದಲೂ ಸ್ನಾನ ಊಟಗಳಿಗೂ ನಿಲ್ಲದೆ ತ್ವರೆಯಿಂದ ಬಂದುದರಿಂದಲೂ ಅವನ ಮೈ ಧೂಳು ಮುಚ್ಚಿತ್ತು, ಕೃಶವಾಗಿತ್ತು. ಯುದ್ಧದಲ್ಲ ಪಡೆದ ಗಾಯಗಳಿಗೆ ಕಟ್ಟಿದ್ದ ಬಟ್ಟೆ ಇನ್ನೂ ಹಾಗೆಯೇ ಇತ್ತು. ತಲೆಗೂದಲು ಕೆದರಿತ್ತು, ಮುಖ ಕಾಂತಿಹೀನವಾಗಿತ್ತು. ತಂದೆತಾಯಿಯನ್ನು ಕಳೆದುಕೊಂಡು ಪರದೇಶಿಯಂತೆ ಮನೆಗೆ ಹಿಂದಿರುಗುತ್ತಿದ್ದ ಹಿರಿಯಣ್ಣನ ಬರವನ್ನು ಕೇಳಿ ಹರ್ಷನು ಅವನನ್ನು ಎದುರುಗೊಳ್ಳಲು ಹೋದನು.

ಅಣ್ಣ ತಮ್ಮಂದಿರಿಬ್ಬರೂ ಒಬ್ಬರನ್ನೊಬ್ಬರು ದೀರ್ಘಕಾಲ ತಬ್ಬಿಕೊಂಡು ಅತ್ತರು. ಬಹುಕಾಲದ ಮೇಲೆ ತನ್ನ ದುಃಖವನ್ನು ಸಮಾಧಾನಮಾಡಿಕೊಂಡು, ರಾಜ್ಯವರ್ಧನನು ನೀರಿನಿಂದ ಕಣ್ಣು ತೊಳೆದುಕೊಂಡನು. ಅನಂತರ ಸ್ನಾನಗೃಹಕ್ಕೆ ಹೋಗಿ ಮಿಂದು ಬಂದು, ಮಹಡಿಯ ಹೊರಗೆ ಹಾಕಿದ್ದ ಮಂಚದ ಮೇಲೆ ಬಿದ್ದುಕೊಂಡನು. ಹರ್ಷನು ತಾನೂ ಸ್ನಾನಮಾಡಿ ಬಂದು, ಅಣ್ಣನ ಪಕ್ಕದಲ್ಲಿ ಒಂದು

ಕಂಬಳಿಯ ಮೇಲೆ ಮಲಗಿಕೊಂಡನು. ಇಬ್ಬರೂ ಮಾತನಾಡದೆ ಮಲಗಿ, ಹುದುಗಲಾರದ ದುಃಖದೊಡನೆ ಹೋರಾಡುತ್ತಿದ್ದರು.

ಹೀಗೆಯೇ ಸಂಜೆಯಾಗಲು, ಸೋದರರಿಬ್ಬರೂ ಅಪ್ಪನ ಬಲವಂತಕ್ಕಾಗಿ ಊಟದ ಶಾಸ್ತ್ರವನ್ನು ಮುಗಿಸಿ ಬಂದರು. ಆಗ ರಾಜ್ಯವರ್ಧನನು ತಮ್ಮನನ್ನು ಕರೆದು ಪಕ್ಕದಲ್ಲಿ ಕುಳ್ಳಿರಿಸಿಕೊಂಡು "ತಮ್ಮ, ಹರ್ಷ, ನೀನು ಇನ್ನೂ ಚಿಕ್ಕವನು, ಹಿರಿಯರ ಮಾತು ನಿನಗೆ ಆವಶ್ಯಕ. ನೀನು ಚಿಕ್ಕಂದಿನಿಂದ ಎಲ್ಲ ನಡತೆಯಲ್ಲೂ ಗತಿಸಿದ ಮಹಾರಾಜನನ್ನೇ ಹೋಲುತ್ತಿರುವೆ. ಅದರಿಂದ ನಾನೊಂದು ಸೂಚಿಸಿದರೆ ಅದಕ್ಕೆ ನೀನು ಎದುರಾಗಬೇಡ. ಹಿಂದೆ ಮಾಂಧಾತ ಮಡಿದಾಗ ಪುರುಕುತ್ಸನೇನು ಮಾಡಿದ? ದಿಲೀಪ ಸತ್ತಾಗ ರಘುವೇನು ಮಾಡಿದ? ದಶರಥನನಂತರ ರಾಮ ಮಾಡಿದುದೇನು? ಬೇರೆ ಬೇಡ, ತಾತನಾದ ಆದಿತ್ಯವರ್ಧನನ ಅವಸಾನದ ಬಳಿಕ ಅಯ್ಯ ಪ್ರಭಾಕರವರ್ಧನನೇನು ಮಾಡಿದ? ಮಡಿದ ಆರ್ಯನ ರಾಜ್ಯಭಾರವನ್ನು ವಹಿಸಲಿಲ್ಲವೆ? ಹರ್ಷ, ಶೋಕಕ್ಕೆ ಸೋಲುವವನು ಹೇಡಿಯಾಗಿರಬೇಕು ಅಥವ ಹೆಂಗಸಾಗಿರಬೇಕೆಂದು ನಾನು ಬಲ್ಲೆ. ಆದರೇನು ಮಾಡಲಿ? ಯಾವುದೋ ಹೇಡಿತನ, ಯಾವುದೋ ಹೆಂಗಸುತನ ನನ್ನಲ್ಲಿ ಸೇರಿಕೊಂಡು, ನನ್ನ ಶೋಕ ನನ್ನನ್ನು ಮೆಟ್ಟಿದೆ. ನನ್ನ ಧೃತಿ ನನ್ನ ತಂದೆಯೊಡನೆಯೇ ಹೋಯಿತು. ಈ ದುಃಖ ನಾನು ತಡೆಯಲಾರೆ, ತಮ್ಮ! ಹೀಗೆ ಗಂಡಸುತನವಿಲ್ಲದ ನಾನು ರಾಜ್ಯಕ್ಕೆ ಅರ್ಹನಲ್ಲ. ಅದರಿಂದ ಬಾಲಭಾವವನ್ನು ಮರೆತು ಈ ಅರಸುತನವನ್ನು ಸ್ವೀಕರಿಸಿ ಸಾಮ್ರಾಜನಾಗು" ಎಂದು ನುಡಿದು, ತನ್ನ ದೊರೆತನವನ್ನು ದೂರ ಬಿಸುಟಂತೆ ತನ್ನ ಕತ್ತಿಯನ್ನು ದೂರ ಎಸೆದನು.

ಹರ್ಷನು ಯಾವುದು ಆಗಬಹುದೆಂದು ಅಂಜಿದ್ದನು, ಯಾವುದು ಆಗದಿರಲೆಂದು ಹಾರೈಸುತ್ತಿದ್ದನು, ಅದೇ ಆಯಿತು. ರಾಜ್ಯವರ್ಧನನು ತನ್ನ ರಾಜ್ಯಪರಿತ್ಯಾಗದ ಮಾತನಾಡಿ ಕತ್ತಿ ಬಿಸುಟುದು ಹರ್ಷನಿಗೆ ಕತ್ತಿಯಿಂದ ಹೊಡೆದಂತಾಯಿತು. ಯಾರಾದರೂ ಚಾಡಿ ಹೇಳಿ ತನ್ನ ಮೇಲೆ ಅಣ್ಣನಿಗೆ ಕೋಪಬಂದಿರಬಹುದೆ?—ಎಂದು ಶಂಕಿಸಿದನು. ಇಲ್ಲದಿದ್ದರೆ ತನ್ನನ್ನು ಪರೀಕ್ಷಿಸುತ್ತಿರಬಹುದೆ? ದುಃಖದಿಂದ ಸಂಭವಿಸಿರಬಹುದಾದ

ಮತಿಭ್ರಮಣೆಯ ಫಲವೊ ಇದು? ಹಾಗಿಲ್ಲದೆ, ಅವನೊಂದು ಹೇಳಿ, ದುಃಖದಿಂದ ಬುದ್ಧಿ ಕೆಟ್ಟು ನಾನೇ ಬೇರೆ ತಿಳಿದೆನೋ? ನಾನು ಪುಷ್ಪಭೂತಿಯ ವಂಶದವನಲ್ಲ ಎಂಬಂತೆ, ಕನಿಷ್ಠನಾದ ನನಗೆ ಜ್ಯೇಷ್ಠನು ರಾಜ್ಯದಾನ ತೋರಿಸುವುದು ಕಲಿಯುಗದ ಹಾಸ್ಯವೊ? ನಮ್ಮ ಮನೆತನದ ಕೇಡನ್ನು ಸೂಚಿಸುವ ಚಿಹ್ನೆಯಿರಬಹುದೆ ಇದು? ಹೀಗೆ ಮಾಡಬಾರದುದನ್ನು ಮಾಡೆಂದು ನನಗೆ ಪ್ರೇರಿಸುವುದೇಕೆ? ಅಂತಹ ತಂದೆಯನ್ನು ಕಳೆದುಕೊಂಡ ಮೇಲೆ ನಾರುಬಟ್ಟೆ ಧರಿಸಿ, ಆಶ್ರಮಕ್ಕೆ ನಡೆದು, ತಪಸ್ಸುಮಾಡುವುದೇನೋ ಸಾಧುವೆ ಆದರೆ ರಾಜತ್ವವನ್ನು ಹೀಗೆ ಬದಲಾಯಿಸಿ, ಮರಳು ಭೂಮಿಗೆ ಕೆಂಡ ಸುರಿದಂತೆ, ನೊಂದವನನ್ನು ನೋಯಿಸಬಾರದು, ಅಣ್ಣನಿಗೆ ಇದು ತಕ್ಕುದಲ್ಲ. ಅಂತಹ ತಂದೆ ಸತ್ತ ಮೇಲೆ, ಇಂತಹ ಅಣ್ಣನು ವನಕ್ಕೆ ತೆರಳಿದ ಮೇಲೆ, ರಾಜ್ಯವನ್ನು ಸ್ವೀಕರಿಸಲು ಬಯಸುವವನಾವನು ಈ ಲೋಕದಲ್ಲಿರುವನು? ಈ ಯೋಚನೆ ಅಣ್ಣನ ಮನಸ್ಸಿಗೆ ಬಂದುದಾದರೂ ಹೇಗೆ? ರಾಮ, ರಘು, ಪುರುಕುತ್ಸರನ್ನು ನೆನೆದುದು ಸರಿಯೆ, ಆದರೆ ಲಕ್ಷ್ಮಣ, ಭೀಮ ಮುಂತಾದವರನ್ನು ಮರೆಯಲು ನಾನೇನು ತಪ್ಪುಮಾಡಿರುವೆನು? ಏನು ಯೋಚಿಸಿ ಏನು? ಅಣ್ಣನು ರಾಜ್ಯಬಿಟ್ಟು ಕಾಡಿಗೆ ಹೋಗುವುದಾದರೆ ನಾನೂ ಆತನ ಹಿಂದೆಯೆ ಹೋಗುವೆನು; ನಾನು ಬೇರೆ ರಾಜ್ಯದಲ್ಲಿ ನಿಲ್ಲತಕ್ಕವನಲ್ಲ. ಅಣ್ಣನ ಆಜ್ಞೆಯನ್ನು ಉಲ್ಲಂಘಿಸುವ ದೋಷಕ್ಕೆ ಕಾಡಿನಲ್ಲಿ ಪ್ರಾಯಶ್ಚಿತ್ತ ಮಾಡಿಕೊಂಡರಾಯಿತು.

ರಾಜ್ಯವರ್ಧನನ ನಡತೆಗೆ ಹೀಗೆ ಕಾರಣಗಳನ್ನು ಚಿಂತಿಸಿ ಚಿಂತಿಸಿ, ಹರ್ಷನು ಕಡೆಗೆ ಮೇಲಿನ ನಿರ್ಧರಕ್ಕೆ ಬಂದು, ಅಣ್ಣನಿಗೆ ಬದಲು ಮಾತಾಡದೆ ನಿಂತಿದ್ದನು.

## ರಾಜ್ಯವರ್ಧನನ ಯುದ್ಧಯಾತ್ರೆ

ಅಣ್ಣತಮ್ಮಂದಿರು ಹೀಗೆ ಕುಳಿತಿರುವಾಗ ಸಂವಾದಕನೆಂಬ ಸೇವಕನು ಗೋಳಾಡುತ್ತ ಬಂದು ರಾಜಕುಮಾರರಿಗೆ ಹೊಸ ಸಿಡಿಲಿನ ಸುದ್ದಿ ತಂದನು. ಆತನು ರಾಜ್ಯಶ್ರೀಯ ಆಪ್ತಚಾರ. ಅವನು ಬಂದುದು ಕನ್ಯಾ

ಕುಬ್ಜದಿಂದ. ಮಾಳವದ ದೊರೆಯು ಕನ್ಯಾಕುಬ್ಜದ ಮೇಲೆ ಬೀಳಲು ಬಹು ದಿನದಿಂದ ಸಮಯ ಕಾಯುತ್ತಿದ್ದ. ಆದರೆ ತನ್ನ ಅಧಿರಾಜನಾದ ಪ್ರಭಾಕರವರ್ಧನನಿಗೆ ಕನ್ಯಾಕುಬ್ಜದ ಅವಂತಿವರ್ಮನ ಮಗನು ಅಳಿಯನಾದುದರಿಂದ ಸುಮ್ಮನಿರಬೇಕಾಗಿತ್ತು. ಇತ್ತ ಪ್ರಭಾಕರವರ್ಧನನು ಮಡಿದನು. ಸಮಯ ಕಾಯುತ್ತಿದ್ದ ಮಾಳವದರಸನು ಅದೇ ದಿನವೇ ಗ್ರಹವರ್ಮನನ್ನು ಕೊಂದು, ರಾಜ್ಯಶ್ರೀಯನ್ನು ಕನ್ಯಾಕುಬ್ಜದ ಸೆರೆಮನೆಯಲ್ಲಿ ಹಾಕಿದನು. ಈ ಸುದಿಗಳನ್ನೆಲ್ಲ ತಿಳಿಸಿ, ಸಂವಾದಕನು "ಇಷ್ಟು ಸಾಲದೆ, ಮಾಳವದರಸು ಇಲ್ಲಿಯ ಸೇನೆಯು ನಾಯಕನಿಲ್ಲದಾಯಿತೆಂದು ಭಾವಿಸಿ ದಂಡೆತ್ತಿಬರಲು ಉದ್ಯುಕ್ತನಾಗಿರುವನೆಂದು ಕೇಳಿರುವೆನು" ಎಂದನು.

ಈ ಸುದ್ದಿಯಿಂದ ಸೋದರರಿಬ್ಬರೂ ಪರಿವರ್ತಿತರಾದರು. ಯೌವನದ ಹುರುಪಿನ ಮುಂದೆ, ತಮ್ಮ ವಂಶದ ಹೆಸರನ್ನು ಉಳಿಸುವ ಉತ್ಕಟೇಚ್ಛೆಯ ಮುಂದೆ, ತಂಗಿಯ ದುಃಸ್ಥಿತಿಗಾಗಿ ಹುಟ್ಟಿದ ಅನುಕಂಪದ ಮುಂದೆ, ಮಾಳವೇಶ್ವರನ ಮೇಲೆ ಜನಿಸಿದ ಕೋಪಾವೇಶದ ಮುಂದೆ ಅದುವರೆಗೆ ಆವರಿಸಿದ ದುಃಖ ನಿಲ್ಲಲಾರದೆ ಅಡಗಿಹೋಯಿತು. ರಾಜ್ಯವರ್ಧನನ ದೇಹದಲ್ಲಿ ಕೋಪ ತಾಂಡವವಾಡುತ್ತ, ಗಂಟಿಕ್ಕಿದ ಹುಬ್ಬಿನ ನಡುವೆ ಕಿಡಿ ಕಾರುತ್ತಿತ್ತು. ಅವನ ಬಲಗೈ ಎಸೆದ ಕತ್ತಿಯನ್ನು ಮರಳಿ ಎತ್ತಿಕೊಂಡಿತು. ಎಡಗೈ ತಾನಾಗಿಯೇ ಮೇಲೆದ್ದು ಬಲಭುಜವನ್ನು ಮರ್ದಿಸತೊಡಗಿತು. ಅವನು ತಮ್ಮನ ಕಡೆ ತಿರುಗಿ "ತಮ್ಮ, ಹರ್ಷ! ಇದೋ, ಮಾಳವ ವಂಶವನ್ನು ಮಣ್ಣುಗೂಡಿಸಲು ಹೋಗುವೆನು. ಈ ಕಾರ್ಯವೇ ನನ್ನ ಮನೆತನ, ನನ್ನ ದೊರೆತನ, ನನ್ನ ರಾಜ್ಯ, ನನ್ನ ಜನಪದ! ನೀಚ ಮಾಳವವಂಶದ ನಾಶವೆ ಈಗ ನನ್ನ ಸರ್ವಸ್ವ! ಇದೆ ನನ್ನ ನಾರುಮಡಿ, ನನ್ನ ತಪಸ್ಸು, ನನ್ನ ದುಃಖಶಮನಕ್ಕೆ ಉಪಾಯ! ಹಾ ಹಾ, ಮಾಳವದವರು ಪುಷ್ಪಭೂತಿವಂಶದವರನ್ನು ಕೆಣಕಿ ಬದುಕಿಯಾರೆ! ಅದಕ್ಕಿಂತ ಜಿಂಕೆ ಸಿಂಹವನ್ನು ಕಚ್ಚಬಹುದು; ಕಪ್ಪೆ ನಾಗರಹಾವನ್ನು ಅಪ್ಪಳಿಸಬಹುದು; ನೀರುಹಾವು ಗರುಡನನ್ನು ಹಿಡಿಯಬಹುದು. ಪುಷ್ಪಭೂತಿವಂಶವನ್ನು ಕೆಣಕಲು

ಈ ಮಾಳವದವರು! ಹರ್ಷ, ಈ ದೊರೆಗಳೂ ಎಲ್ಲ ಆನೆಗಳೂ ನಿನ್ನೊಡನೆ ಇಲ್ಲಿ ನಿಲ್ಲಲಿ. ಹತ್ತು ಸಾವಿರ ಕುದುರೆಯೊಡನೆ ಭಣ್ಡಿ ಮಾತ್ರ ನನ್ನೊಡನೆ ಬರಲಿ" ಎಂದನು. ಅವನ ಆಜ್ಞೆಯಂತೆ ಪ್ರಯಾಣ ಪಟಹದ ಧ್ವನಿ ನಗರಿಯಲ್ಲಿ ಹರಡಿತು.

ರಾಜ್ಯಶ್ರೀ ಗ್ರಹವರ್ಮರ ಗತಿಗೆ ಕಾರಣನಾದ ಮಾಳವನ ಕಾರ್ಯಕ್ಕೆ ಮುನಿದೆದ್ದ ಹರ್ಷನು ತನ್ನನ್ನು ರಾಜಧಾನಿಯಲ್ಲೇ ನಿಲ್ಲೆಂದ ಅಣ್ಣನ ಮಾತಿಗೆ ನೊಂದನು. ತಾನು ಹಿರಿಯನ ಮಾತಿಗೆ ಎದುರಾಡುವೆನೆಂಬ ಅರಿವೇ ಇಲ್ಲದೆ "ಅಣ್ಣಾ, ನಾನೇಕೆ ನಿಮ್ಮೊಡನೆ ಬರಬಾರದು? ನನ್ನನ್ನು ಬಾಲನೆಂದೆಣಿಸಿದರೆ, ಅದೇ ಕಾರಣದಿಂದ ನನ್ನೊಬ್ಬನನ್ನೇ ಇಲ್ಲಿ ಬಿಡಬಾರದು, ನಿಮ್ಮ ರಕ್ಷಣೆ ನನಗೆ ಅಗತ್ಯ. ನಾನು ಬಲಹೀನನೆಂದು ತಿಳಿಯುವುದಾದರೆ, ನನ್ನನ್ನು ಎಂದು ಪರೀಕ್ಷಿಸಿರುವಿರಿ? ಇಬ್ಬರೂ ಹೋಗಬಾರದಾದರೆ ನೀವು ಇಲ್ಲಿ ನಿಲ್ಲಿರಿ, ನನ್ನನ್ನು ಮಾಳವನ ಮೇಲೆ ಕಳುಹಿಸಿರಿ. ನನ್ನನ್ನು ಬೇರೆಯೆಂದು ಭಾವಿಸದೆ, ದಯೆಮಾಡಿ ನನ್ನನ್ನೂ ಕರೆದುಕೊಂಡು ಹೋಗಿರಿ" ಎಂದು ನಾನಾವಿಧವಾಗಿ ಅಂಗಲಾಚಿ ಬೇಡಿಕೊಂಡನು.

ಅದಕ್ಕೆ ರಾಜ್ಯವರ್ಧನನು "ಹರ್ಷ, ಈ ಮಾಳವನಂತಹ ಕ್ಷುದ್ರ ಶತ್ರುವನ್ನು ಮುರಿಯಲು ನಾವು ಇಬ್ಬರೂ ಹೋಗಬೇಕೆ! ಒಂದು ಹುಲು ಜಿಂಕೆಯನ್ನು ಕೊಲ್ಲಲು ಒಂದು ಸಿಂಹ ಸಾಲದೆ? ಒಂದು ಹುಲ್ಲು ಕಂತೆ ಸುಡಲು ಒಂದು ಕಿಡಿ ಸಾಲದೆ? ಆದರಿಂದ ನಾನೇ ಹೋಗುವೆನು. ನಿನ್ನಂತಹ ವೀರನಿಗೆ ಮಾಳವನು ಯಾವ ಮೂಲೆ, ಹರ್ಷ? ಮಹಾ ಮಹಾ ಪರ್ವತಶ್ರೇಣಿಗಳನ್ನು ನಡುಗಿಸಬಲ್ಲ ಪ್ರಚಂಡ ಪವನನು ಹತ್ತಿಯ ಗಿಡದ ಮೇಲೆ ಬೀಸುವುದಿಲ್ಲ. ಸುಮೇರು ಪರ್ವತದ ತುತ್ತತುದಿಗೆ ಮುತ್ತಿಗೆ ಹಾಕುವ ಮಹಾ ಮೇಘ ಮಾಲೆಯು ಸಣ್ಣ ಹುಲು ಹುತ್ತದ ಮೇಲೆ ಎರಗುವುದಿಲ್ಲ. ಆದರಿಂದ ನೀನು ಈ ಕೀಳು ಮಾಳವನ ಮೇಲೆ ನಡೆಯಲಾಗದು. ನಿನ್ನ ತೋಳುಬಲವನ್ನು ತೋರಿ ವಿಜಯಿಯಾಗಬೇಕೆಂದರೆ ಈ ಸಮಸ್ತ ಭೂಮಂಡಲವೇ ನಿನ್ನದಾಗಲು ಕಾದಿದೆ. ಹಿಂದೆ

ಮಾಂಧಾತ ಮಾಡಿದಂತೆ ಧನುಸ್ಸು ಹಿಡಿದು ದಿಗ್ವಿಜಯಕ್ಕೆ ಹೊರಡು, ನಿನ್ನ ವಿಜಯದಾಹವನ್ನು ಶಮನ ಮಾಡಿಕೊ. ಶತ್ರುಗಳ ಸಾವಿಗೆ ಹಸಿದಿರುವ ನನಗೆ ಈ ಒಂದೇ ಒಂದು ತುತ್ತನ್ನು ಬಿಟ್ಟುಕೊಡು.'' ಎಂದು ಹರ್ಷನು ಮರುನುಡಿಯದಂತೆ ನುಡಿದು, ಅದೇ ದಿನ ಸೇನೆಯೊಡನೆ ಯುದ್ಧಕ್ಕೆ ಹೊರಟನು.

## ಹರ್ಷನ ಸಮರಸನ್ನಾಹ

ಹೀಗೆ ಅಣ್ಣ ರಾಜ್ಯವರ್ಧನನು ಯುದ್ಧಕ್ಕಾಗಿ ತೆರಳಿದನು. ಇತ್ತ ತಂದೆಯಾದ ಪ್ರಭಾಕರವರ್ಧನನೂ ತಾಯಿಯಾದ ಯಶೋವತಿಯೂ ಇಹಲೋಕವನ್ನು ಬಿಟ್ಟುಹೋದರು. ಅತ್ತ ತಂಗಿಯ ಗಂಡನಾದ ಗ್ರಹವರ್ಮನು ಗತಾಸುವಾಗಿ, ತಂಗಿಯಾದ ರಾಜ್ಯಶ್ರೀ ಸೆರೆಯಲ್ಲಿದ್ದಳು. ಹೀಗೆ ಪರಂಪರೆಯಾಗಿ ಬಂದೊದಗಿದ ಅನರ್ಥಗಳನ್ನು ಚಿಂತಿಸುತ್ತ, ಹಿಂಡನ್ನು ಅಗಲಿ ಏಕಾಕಿಯಾದ ಸಲಗದಂತೆ ಹರ್ಷನು ಪರಿತಪಿಸುತ್ತಿದ್ದನು.

ಕೆಲವು ದಿನಗಳು ಕಳೆದುವು. ಒಂದು ರಾತ್ರೆ ಮಲಗಿರುವಾಗ ಹರ್ಷನಿಗೆ ಒಂದು ಹೊಸ ಕನಸು ಬಿತ್ತು: ಗಗನವನ್ನು ಚುಂಬಿಸುತ್ತ ನಿಂತಿದ್ದ ಒಂದು ಕಬ್ಬಿಣದ ಕಂಬವು ಇವನು ನೋಡುತ್ತಿರುವಾಗಲೆ ಇದ್ದಕ್ಕಿದ್ದಂತೆ ಸಿಡಿದು ಪುಡಿಪುಡಿಯಾಯಿತು. ಹಿಂದಿನ ಕನಸುಗಳನ್ನೂ ಅವು ಸೂಚಿಸಿ ಆಗಿಬಂದ ಅನರ್ಥಗಳನ್ನೂ ಅವನು ಇನ್ನೂ ಮರೆತಿರಲಿಲ್ಲ. ಈಗ ಈ ಹೊಸ ಕನಸಿಗೆ ನಡುಗಿದನು. ಈ ಹೊಸ ಕನಸೇನು ಸೂಚಿಸೀತು? ಆನೆಯು ತುಳಿದಿಕ್ಕಿದ ಎಳೆ ಬಿದಿರಿನ ಮೆಳೆಯಂತೆ ತನ್ನ ವಂಶವು ವಿಧಿಯ ತುಳಿತಕ್ಕೆ ಸಿಕ್ಕಿ ನವೆದಿತ್ತು. ಇನ್ನೇನು ಹೊಸ ಆಘಾತ ಕಾಯ್ದುಕೊಂಡಿರಬಹುದು? ಮಾಳವನ ಮೇಲೆ ದಂಡೆತ್ತಿ ನಡೆದ ಅಣ್ಣನನ್ನು ಹರ್ಷನು ನೆನೆದನು. ರಾಜ್ಯವರ್ಧನನಿಗೆ ಏನೂ ಕೇಡಾಗದಿರಲೆಂದು ಮನಃಪೂರ್ವಕವಾಗಿ ಹಾರೈಸುತ್ತ ಮೇಲೆದ್ದನು.

ಹರ್ಷನು ತನ್ನ ಬೆಳಗಿನ ಕ್ರಿಯೆಗಳನ್ನೆಲ್ಲ ಮುಗಿಸಿಕೊಂಡು ಸಭಾಗೃಹಕ್ಕೆ ಬಂದನು. ಅಲ್ಲಿ ಕುಂತಳನೆಂಬವನ ಸುತ್ತ ಅನೇಕ ರಾಜಭೃತ್ಯರು ಖಿನ್ನರಾಗಿ ಅವನತಮುಖರಾಗಿ ನಿಂತಿದ್ದರು. ಧೂಳುಮುಚ್ಚಿದ

ಅವರ ಮುಖ ಬಟ್ಟೆಗಳು ಅವರು ತಂದ ವ್ಯಸನದ ವಾರ್ತೆಯನ್ನು ಸೂಚಿಸುತ್ತಿದ್ದುವು. ರಾಜ್ಯವರ್ಧನನ ಆಪ್ತಭೃತ್ಯನಾದ ಕುಂತಳನು ಆ ಸ್ಥಿತಿಯಲ್ಲಿ ಬಂದುದು ಕಂಡು ಹರ್ಷನ ಎದೆ ಕುಸಿಯಿತು. ಅವನ ಪೇಚಾಟವನ್ನು ನೋಡಲಾರದೆ, ಕುಂತಳನು "ದೇವ! ರಾಜ್ಯವರ್ಧನನು ಹೋದ ಕಾರ್ಯದಲ್ಲಿ ಕೃತಕೃತ್ಯನಾದನು; ಮಾಳವದರಸನನ್ನು ಲೀಲಾಜಾಲವಾಗಿ ಗೆದ್ದು ಇತರ ಶತ್ರುಗಳನ್ನು ನೆಲಸಮಮಾಡಿದನು. ಆದರೆ ಗೌಡದೇಶಾಧಿಪನಾದ ಶಶಾಂಕನು ತಾನು ಅಧೀನನಾದಂತೆ ನಟಿಸಿ, ಮುಂದಿನ ಮೈತ್ರಿಯ ಗುರುತಾಗಿ ತನ್ನ ಮಗಳನ್ನು ರಾಜ್ಯವರ್ಧನನಿಗೆ ಮದುವೆ ಮಾಡಿಕೊಡುವಂತೆ ನಂಬಿಸಿ, ಮೋಸದಿಂದ ಅವನನ್ನು ವಧಿಸಿದನು" ಎಂದು ನಡೆದ ಸುದ್ದಿಯನ್ನು ತಿಳಿಸಿ, ದೊರೆ ಮಡಿದ ಮೇಲೂ ಬದುಕಿ ಬಂದ ತನ್ನ ಗತಿಗೆ ನಾಚುತ್ತ ನಿಂತಿದ್ದನು.

ಹರ್ಷನಿಗೆ, ಅಣ್ಣನು ಮಡಿದ ರೀತಿಯನ್ನು ಕೇಳಿ ಕೆರಳಿದ ಕೋಪದಲ್ಲಿ ಅವನ ಸಾವಿಗೆ ಹುಟ್ಟಿದ ದುಃಖ ಕೊಚ್ಚಿಕೊಂಡು ಹೋಯಿತು. ಎಲ್ಲರೂ ಒಂದಲ್ಲ ಒಂದು ದಿನ ಸಾಯಲೇಬೇಕು. ಆದರೆ ಈ ಅಪಮಾನದ ಮೇಲೆ ಅಪಮಾನ? ಮೊದಲು ಆ ಕೀಳು ಮಾಳವನು ಪುಷ್ಯಭೂತಿಯ ವಂಶವನ್ನು ಕಡೆಗಣಿಸಿ ರಾಜ್ಯಶ್ರೀಯ ದುರ್ದೆಶೆಗೆ ಕಾರಣನಾದುದು! ಈಗ ಈ ಹೇಡಿ ಗೌಡನು ವೀರಾಧಿವೀರನಾದ ರಾಜ್ಯವರ್ಧನನನ್ನು ನಂಬಿಸಿ ಮೋಸದಿಂದ ಕೊಂದುದು! ಈ ಅಪಮಾನ ಸುಮ್ಮನೆ ಕುಳಿತು ಸಹಿಸತಕ್ಕುದಲ್ಲ. ಹರ್ಷನು ಕೆಣಕಿದ ಸಿಂಹದಂತೆ ಕುದಿದು ನೆಗೆದೆದ್ದನು.

"ದ್ರೋಣನನ್ನು ಶಿಖಂಡಿ ಕೊಂದಂತೆ, ಲೋಕವು ಹೇಸುವ ಈ ಅಧಮ ವಧೆಗೆ ಗೌಡದೇಶದ ದೊರೆಯಲ್ಲದೆ ಬೇರಾವನು ಮನಮಾಡುವನು? ಕತ್ತಿ ಬಿಟ್ಟು ಬಂದವರನ್ನು ಮೋಸದಲ್ಲಿ ಕೊಲ್ಲುವುದು ಶೀಲವೆ? ಮೈತ್ರಿಯನ್ನು ಸ್ವೀಕರಿಸಿ ಬಂದವರ ಮರಣವನ್ನು ಸಾಧಿಸುವುದು ಯಾವ ನಡತೆ? ಆ ನೀಚನನ್ನು ನೆನೆಯುತ್ತಿದ್ದರೆ ನನ್ನ ನಾಲಿಗೆ ಕೊಳೆಯಾದೀತು. ಮುಂದೆ ಅವನಿಗೇನು ಶಿಕ್ಷೆ ವಿಧಿಸಲಿ? ಅವನಿಗಾವ ಗತಿ ಕಾಣಿಸಲಿ?" ಎಂದು ಹರ್ಷನು ಗುಡುಗಿದನು

ಆಗ ಸೇನಾಪತಿ ಸಿಂಹನಾದನು ಎದ್ದು ನಿಂತನು. ಆವನು ಪ್ರಭಾಕರ ವರ್ಧನನ ಸೇನೆಯಲ್ಲಿದ್ದು, ಪ್ರತಿ ಯುದ್ಧದಲ್ಲೂ ಸೇನೆಯ ಮುಂಚೂಣಿ ಯಲ್ಲಿ ಕಾದಾಡಿ, ರಣಜ್ಞಾನದಲ್ಲಿ ಪಕ್ವವಾದವನು; ನೆರೆ ಬಂದು ನೋಡಲು ಮುದುಕನಾದರೂ, ಆತನ ಕಾಯಬಲ ಮನೋಬಲಗಳು ಮುದಿಯಾಗಿರಲಿಲ್ಲ. ಆತನು ಎದ್ದು ನಿಂತು, ಗಂಭೀರ ದುಂದುಭಿಘೋಷ ದಂತೆ ನುಡಿದನು: "ದೇವ! ಮಹಾರಾಜನು ದೇವತ್ವವನ್ನು ಪಡೆದು, ರಾಜ್ಯವರ್ಧನನು ಹೀಗೆ ಮೃತನಾದಮೇಲೆ, ಪುಷ್ಪಭೂತಿ ವಂಶಶೇಷನಾದ ನೀನೇ ನಮ್ಮ ಈ ಭೂಭಾರವನ್ನು ತಾಳಬೇಕಾದ ಆದಿಶೇಷ. ನಿನ್ನ ಹಿರಿಯರ ಹಾದಿಯನ್ನು ಹಿಡಿದು ಮೂಲೋಕಗಳನ್ನೂ ಜಯಿಸು. ನಿನ್ನನ್ನು ನಂಬಿರುವ ಜನಪದವನ್ನು ರಕ್ಷಿಸು. ದೇವ, ಗೌಡದ ದೊರೆ ಯೊಬ್ಬನನ್ನೇ ಶಿಕ್ಷಿಸಿದರೆ ಸಾಲದು. ಹಿಂದೆ ಪರಶುರಾಮನು ತನ್ನ ತಂದೆಯ ಮರಣಕ್ಕೆ ಕಾರಣನಾದ ಕ್ಷತ್ರಿಯನೊಬ್ಬನ ಸಂಹಾರದಿಂದ ಸಂತೃಪ್ತನಾದನೆ? ಸಮಸ್ತ ಕ್ಷತ್ರಿಯ ಕುಲವನ್ನೂ ನಿರ್ಮೂಲಮಾಡಲು ಇಪ್ಪತ್ತೊಂದು ಸಾರಿ ಭೂಭಾಗವನ್ನು ಸುತ್ತಲಿಲ್ಲವೆ? ಅದರಿಂದ ದೇವ, ಗೌಡದ ದೊರೆ ನಡೆದ ರೀತಿಯಲ್ಲಿ ಮುಂದೆ ಯಾವನೂ ನಡೆಯದಿರುವಂತೆ ಸಕಲ ಕ್ಷತ್ರಿಯರನ್ನೂ ಅಡಗಿಸು, ದಿಗ್ವಿಜಯ ಪ್ರಯಾಣಕ್ಕೆ ಸಿದ್ಧನಾಗು!"

ಆಪ್ತ ಸೇನಾಪತಿಯ ಸಲಹೆಗೆ ಒಪ್ಪಿ ಹರ್ಷನು "ತಮ್ಮ ಮತ ನನ್ನ ಮತ. ಅದರಂತೆ ನಾನು ನಡೆಯುವೆನೆಂಬುದಕ್ಕೆ, ಇದೊ, ಇದೆ ನನ್ನ ಪ್ರತಿಜ್ಞೆ! 'ಇನ್ನು ಕೆಲವು ದಿನಗಳಲ್ಲಿ ಗೌಡವಂಶದ ಹೆಸರಳಿಸಿ, ಮಿಕ್ಕಿನ ಮದಿಸಿದ ರಾಜರನ್ನು ಸೋಲಿಸಿ ಅವರ ಅಧಿರಾಜನಾಗದಿದ್ದರೆ, ಈ ದೇಹವನ್ನು ಅಗ್ನಿಗೆ ಒಪ್ಪಿಸುವೆನು! ಇದು ನನ್ನ ಹಿರಿಯರ ಪಾದ ಧೂಳಿಯಾಣೆ!'" ಎಂದು ಪ್ರತಿಜ್ಞೆ ಮಾಡಿದನು

ಹೀಗೆ ಪ್ರತಿಜ್ಞೆಮಾಡಿ, ಶಾಂತಿ ಸಂಗ್ರಾಮ ಸಮಯಗಳಲ್ಲಿ ಮಂತ್ರಿತ್ವ ಮಾಡುವ 'ಸಂಧಿವಿಗ್ರಹಿ' ಎನಿಸಿದ ಅವಂತಿಯ ಕಡೆ ತಿರುಗಿ "ರವಿ ರಥದ ಚಕ್ರ ಚೀತ್ಕಾರಕ್ಕೆ ಚಕಿತರಾಗಿ ಚಾರಣರು ಬಿಟ್ಟೋಡುವ ಸಾನು ವಿನ ಉದಯಾಚಲದವರೆಗೆ, ತ್ರಿಕೂಟವನ್ನು ಕಡಿದ ಕೊಡಲಿಗಳಿಂದ

ರಾಮಚಂದ್ರನ ಲಂಕಾಶಾಸನವನ್ನು ಕೆತ್ತಿರುವ ಸುವೇಲಾದ್ರಿಯವರೆಗೆ, ಮದಸ್ಖಲಿತರಾದ ವರುಣನ ವರನಾರಿಯರ ನೂಪುರ ರವದಿಂದ ಪ್ರತಿಧ್ವನಿತವಾದ ಗುಹೆಗಳ ಅಸ್ತಗಿರಿಯವರೆಗೆ, ಗುಹ್ಯಕ ಗೇಹಿನಿಯರು ಪೂಸಿಕೊಂಡ ಸುಗಂಧಿಗಂಧಪಾಷಾಣದಿಂದ ಸುವಾಸಿತವಾದ ಗುಹಾಗೃಹಗಳ ಗಂಧಮಾದನದ ವರೆಗೆ ಸರ್ವ ರಾಜರೂ ಕಪ್ಪ ಹಿಡಿಯಲಿ, ಇಲ್ಲ ಕತ್ತಿ ಹಿಡಿಯಲಿ ತಲೆ ಬಗ್ಗಿಸಲಿ, ಇಲ್ಲ ಬಿಲ್ಲು ಬಗ್ಗಿಸಲಿ, ಅವರ ಕಿವಿಗೆ ನನ್ನ ಮಾತು ತಾಗಲಿ, ಇಲ್ಲ ಬಿಲ್ಲಿನ ಹಗ್ಗ ತಾಗಲಿ, ಅವರ ತಲೆಯ ಮೇಲೆ ನನ್ನ ಕಾಲಿನ ಧೂಳಾಗಲಿ, ಇಲ್ಲ ಶಿರಸ್ತ್ರಾಣವಾಗಲಿ, ಅವರು ಕೈ ಜೋಡಿಸಲಿ, ಇಲ್ಲವ ಕಾಳಗಕ್ಕೆ ಆನೆ ಜೋಡಿಸಲಿ; ತಮ್ಮ ರಾಜ್ಯಕೋಶಗಳ ಸ್ವಾಮಿತ್ವವನ್ನು ಬಿಡಲಿ, ಇಲ್ಲ ಬಾಣಗಳನ್ನು ಬಿಡಲಿ; ಸಕಲ ದೆಸೆಗಳ ಸಮಸ್ತ ರಾಜರೂ ನನ್ನ ಕಾಲುಗುರುಗಳಲ್ಲಿ ತಮ್ಮ ಮುಖ ನೋಡಿಕೊಳ್ಳಲಿ, ಇಲ್ಲದಿದ್ದರೆ ತಮ್ಮ ಕತ್ತಿಗಳ ಅಲಗಿನಲ್ಲಿ ನೋಡಿಕೊಳ್ಳಲಿ. ಅವಂತಿ! ಈ ಅರ್ಥವು ಸಕಲರಿಗೂ ಸ್ಫುಟವಾಗುವಂತೆ ಬರೆಯಿಸು!” ಎಂದು ಆಜ್ಞೆಮಾಡಿದನು.

ಇದಾದನಂತರ ಸಭೆ ವಿಸರ್ಜನೆಯಾಯಿತು. ಸಾಮಂತರನ್ನು ಕಳುಹಿಸಿಕೊಟ್ಟು, ಹರ್ಷನು ಸ್ನಾನಕ್ಕಾಗಿ ಹೊರಟನು. ಅಂದಿನ ಕಾರ್ಯಗಳನ್ನೆಲ್ಲ ಮುಗಿಸಿದನು. ಸಂಜೆಯ ಸಭೆಯನ್ನು ಕೊಂಚ ಕಾಲದಲ್ಲಿಯೇ ತೀರಿಸಿಕೊಂಡು, ರಾತ್ರಿ ಶಯನಗೃಹವನ್ನು ಸೇರಿದನು. ಆ ರಾತ್ರಿಯೆಲ್ಲ ಹರ್ಷನಿಗೆ ನಿದ್ದೆ ಹತ್ತಲಿಲ್ಲ. ಕಣ್ಣು ಮುಚ್ಚಿದನೆಂದರೆ, ರಾಜ್ಯವರ್ಧನನ ರೂಪು ಅವನೆದುರು ಬಂದು ನಿಲ್ಲುತ್ತಿತ್ತು. ಆ ರಾತ್ರಿಯೆಲ್ಲ ಹಾಗೆ ಅಣ್ಣನನ್ನು ಜ್ಞಾಪಿಸಿಕೊಳ್ಳುತ್ತ, ಮರುಕೊಳಿಸುವ ದುಃಖದೊಡನೆ ಹೋರಾಡುತ್ತಿದ್ದನು. ಬೆಳಗಿನವರೆಗು ಹಾಗೆಯೆ ಕಳೆದು, ಬೆಳಗಾಗಲು 'ಅಶೇಷ ಗಜಸಾಧನಾಧಿಕಾರಿ' ಯೆನಿಸಿ ಆನೆಯ ಸೇನೆಗೆ ಅಧಿಪತಿಯಾದ ಸ್ಕಂದಗುಪ್ತನನ್ನು ಕರೆತರಲು ಪ್ರತೀಹಾರಿಯನ್ನು ಕಳುಹಿಸಿದನು.

ತನ್ನನ್ನು ಕರೆಯಲು ಮೇಲಿಂದ ಮೇಲೆ ಬರುತ್ತಿದ್ದ ಜನರನ್ನು ಕಂಡು, ಸ್ಕಂದಗುಪ್ತನು ತನ್ನ ಆನೆಗೂ ಕಾಯದೆ ಪಾದಚಾರಿಯಾಗಿ ಅರಮನೆಯ ಕಡೆ ನಡೆದನು. ನಡೆದು, ದೂರದಿಂದಲೇ ಹರ್ಷನಿಗೆ ತಲೆ

ಬಾಗಿ ನಮಸ್ಕರಿಸಿ, ಅನತಿದೂರದಲ್ಲಿ ಕುಳಿತುಕೊಂಡನು. ಆಗ ಹರ್ಷನು "ಸ್ಕಂದಗುಪ್ತ, ನನ್ನ ಹಿರಿಯಣ್ಣನು ಮಾಳವನ ಮೇಲೆ ನಡೆದುದು, ಗೌಡದೇಶಾಧಿಪನ ಮೋಸ, ನನ್ನ ನಿಶ್ಚಯ ಪ್ರತಿಜ್ಞೆಗಳು ಎಲ್ಲವೂ ನಿನಗೆ ತಿಳಿದಿವೆ. ಅದರಿಂದ ಬೇಗನೆ ನಾಗವನದಿಂದ ಆನೆಗಳನ್ನೆಲ್ಲ ಕರೆತರಿಸು. ವಿಳಂಬಕ್ಕೆ ಇದು ಸಮಯವಲ್ಲ" ಎಂದನು. ಅದಕ್ಕೆ ಉತ್ತರವಾಗಿ ಸ್ಕಂದಗುಪ್ತನು, ಸಿಂಹನಾದನ ಸಲಹೆಯ ಜೊತೆಗೆ ತನ್ನ ಸೂಚನೆಯನ್ನೂ ನಿವೇದಿಸಿದನು : "ದೇವ! ನಿನ್ನ ಆಜ್ಞೆ ಆದಂತೆಯೇ ಭಾವಿಸು. ಆದರೂ ಭೃತ್ಯಭಕ್ತಿಯಿಂದ ಒಂದೆರಡು ನುಡಿಯಲಿಳಿಸುವೆನು, ಕೇಳಬೇಕು ಪುಷ್ಪಭೂತಿಯ ವಂಶಕ್ಕೆ ತಕ್ಕಂತೆ, ಅಣ್ಣನ ಮೇಲಿನ ಅಮಿತವಾದ ಪ್ರೇಮಕ್ಕೆ ತಕ್ಕಂತೆ, ಈ ದಿಗ್ವಿಜಯಕ್ಕೆ ನೀನು ಹೊರಟಿರುವುದು ಸಾಧುವೇ ಸರಿ ಆದರೂ ರಾಜ್ಯವರ್ಧನನ ಕತೆಯಿಂದ ನಿನಗೆ ದುಷ್ಟರ ನಡತೆ ಸ್ವಲ್ಪ ತಿಳಿದಿರಬಹುದು. ಆಹಾರ ಅಲಂಕಾರ ರೂಪುಗಳು ಬೇರೆ ಬೇರೆಯಾಗಿರುವಂತೆಯೇ ದೇಶದೇಶಗಳ ನಡತೆಯೂ ಬೇರೆಬೇರೆಯಾಗಿರುವುದು. ನಿನ್ನ ಸರಲಸ್ವಭಾವದಿಂದ ನೀನು ಎಲ್ಲರಲ್ಲಿಯೂ ವಿಶ್ವಾಸವಿಡುವೆ ; ಅದು ಈ ದೇಶಾಚಾರಕ್ಕೆ ಉಚಿತವಾದುದು. ಆದರೆ ಎಲ್ಲ ಕಡೆಯೂ ಹಾಗೆ ನಡೆಯಲಾಗದು. ಅಜಾಗರೂಕತೆಯಿಂದ ಸಂಭವಿಸಿದ ಅನರ್ಥಗಳನ್ನು ಪ್ರತಿದಿನವೂ ನೀನೇ ಕೇಳುತ್ತಿರುವೆ." ಈ ರೀತಿಯಲ್ಲಿ, ಎಲ್ಲರನ್ನೂ ಆಪ್ತರೆಂದು ನಂಬಿ ಪ್ರಮಾದದಿಂದ ಕೆಟ್ಟವರ ಅನೇಕರ ಉದಾಹರಣೆಗಳನ್ನು ಕೊಟ್ಟು, ಸ್ಕಂದಗುಪ್ತನು ಹರ್ಷನನ್ನು ಎಚ್ಚರಿಸಿದನು. ಎಚ್ಚರಿಸಿ, ಅವನು ತನಗೆ ಕೊಟ್ಟ ಆಜ್ಞೆಯನ್ನು ನಡೆಸಲು ಹೋದನು.

ಹೀಗೆ ಹರ್ಷನು ದಿಗ್ವಿಜಯಕ್ಕೆ ಸಿದ್ಧನಾಗುತ್ತಿರಲು, ಅಕ್ಕಪಕ್ಕದ ರಾಜರ ಅವನತಿ ಸೂಚಕಗಳಾದ ದುರ್ನಿಮಿತ್ತಗಳು ತಡೆಯಿಲ್ಲದೆ ಕಾಣಿಸಿಕೊಳ್ಳುತ್ತಿದ್ದುವು.

---

# ಮಹಾರಾಜಾಧಿರಾಜ ಶ್ರೀ ಹರ್ಷ

## ಹರ್ಷನ ವಿಜಯಯಾತ್ರೆ

ದಿಗ್ವಿಜಯಕ್ಕೆ ತಕ್ಕ ಸಿದ್ಧತೆಗಳು ನಡೆದುವು. ಕೆಲವು ದಿನಗಳು ಕಳೆಯಲು, ಬೇರೊಂದು ದಿವಸ ಪ್ರಯಾಣಕ್ಕೆ ತಕ್ಕ ಶುಭಲಗ್ನದಲ್ಲಿ ಹರ್ಷನು ಸಮಸ್ತ ಸೇನೆಯೊಡನೆ ಪೌರರ ಜಯಘೋಷದ ನಡುವೆ ಹೊರಟು, ಊರಿಗೆ ಸ್ವಲ್ಪ ದೂರದಲ್ಲಿ ಸರಸ್ವತೀ ತೀರದಲ್ಲಿ ಕಟ್ಟಿದ್ದ ದೊಡ್ಡ ತೃಣದೇವಾಲಯದ ಬಳಿಯ ಪ್ರಸ್ಥಾನಭೂಮಿಗೆ ಬಂದನು. ಅಲ್ಲಿಂದಲೇ ವಿಜಯಪ್ರಯಾಣವನ್ನು ಆರಂಭಿಸಬೇಕೆಂದು ನಿಶ್ಚಯವಾಗಿತ್ತು.

ಅಲ್ಲಿ ತಂಗಿರುವಾಗ, ಕರಣಿಕನೊಬ್ಬನು ಹರ್ಷನ ಬಳಿ ಬಂದು "ಈ ದಿನ ಆಜ್ಞೆಯೇನು? ಆಜ್ಞಾಪಿಸಬೇಕು" ಎಂದು ಚಿನ್ನದ ಮುದ್ರೆಯನ್ನು ನೀಡಿದನು. ಹರ್ಷನು ಅದನ್ನು ತೆಗೆದುಕೊಂಡನು. ಆದರೆ ಒಂದು ಮಣ್ಣಿನ ಉಂಡೆಯನ್ನು ತಂದುದು ತಡ. ಆ ಮುದ್ರೆ ಅವನ ಕೈಯಿಂದ ಜಾರಿ ಕೆಳಗೆ ಬಿತ್ತು, ಆ ಮುದ್ರೆಯಲ್ಲಿನ ಅಕ್ಷರ ಮಾಲೆಯು ಸರಸ್ವತೀ ತೀರದ ಮೃದುವಾದ ಮಣ್ಣಿನ ಮೇಲೆ ಸ್ಪಷ್ಟವಾಗಿ ಒತ್ತಿಬಿತ್ತು. ಆ ನಿಮಿತ್ತವನ್ನು ಕಂಡು, ಅದರಂತೆಯೇ ಸಮಸ್ತ ಭೂವಲಯಕ್ಕೂ ತನ್ನ ಮುದ್ರೆ ಒತ್ತಿಬೀಳುವುದೆಂದು ಹರ್ಷನು ಹರ್ಷಿತನಾದನು, ಆ ಮುದ್ರೆ ಜಾರಿ ಬಿದ್ದುದರಲ್ಲಿ ತಾನು ಕೈಕೊಂಡ ಕಾರ್ಯದ ವಿಜಯಸೂಚನೆಯನ್ನು ಕಂಡನು.

ಅದೇ ರಾತ್ರಿ ಮೂರನೆಯ ಯಾಮದಲ್ಲಿ, ಎಲ್ಲ ಜೀವಿಗಳೂ ಮಲಗಿ ಜಗತ್ತು ನಿಶ್ಶಬ್ದವಾಗಿರಲು, ಪ್ರಯಾಣ ಪಟಹಗಳು ಧ್ವನಿಮಾಡಿದುವು. ಕೊಂಚ ಸಮಯದನಂತರ, ಆ ದಿನ ಸೇನೆ ನಡೆಯಬೇಕಾದ ಕ್ರೋಶಗಳ ಸಂಖ್ಯೆಯನ್ನು ತಿಳಿಸಲು ಪಟಹದ ಮೇಲೆ ಎಂಟು ಸಲ ಬಡಿದರು. ಆ ವೇಳೆಗೆ ಸಮಸ್ತ ಸೇನೆಯೂ ಎಚ್ಚತ್ತು ಹೊರಡಲು ಸಿದ್ಧವಾಯಿತು, ಬೆಳ

ಗಾಯಿತು. ಶಂಖಧ್ವನಿಯನ್ನು ಕೇಳಿ ಹೆಜ್ಜೆ ಮುಂದಿಟ್ಟ ಆ ಸೇನೆಯು ಅಂದಿಗೆ ನಿಶ್ಚಿತವಾಗಿದ್ದ ಎಂಟು ಕ್ರೋಶಗಳನ್ನು ಕಳೆದು, ಬೀಡು ಬಿಟ್ಟಿತು.

ಹರ್ಷನು ಪಾಳಯವನ್ನು ಸೇರಿ ತನ್ನ ಕಟಕಕ್ಕೆ ಬಂದಾಗ, ಅಲ್ಲಿ ನೆರೆದಿದ್ದ ಕುಲಪುತ್ರರ ಮತ್ತು ಸಾಮಂತರ ಉತ್ಸಾಹಪೂರ್ಣವಾದ ಮಾತು ಅವನ ಕಿವಿಗೆ ಬಿತ್ತು : "ಹಿಂದೆ, ದಿಗ್ವಿಜಯವನ್ನು ಮೊದಲು ಸಾಧಿಸಿದವನು ಮಾಂಧಾತ. ರಘು, ಅರ್ಜುನ ಮುಂತಾದವರು ಅವನನ್ನು ಅನುಕರಿಸಿದರು. ಹಿಮಾಚಲದಿಂದ ಗಂಧಮಾದನದ ವರೆಗಿನ ಈ ದೂರ ವೇನು ಮಹಾ? ಉತ್ಸಾಹಿಗಳಿಗೆ ತುರುಷ್ಕವಿಷಯ ಒಂದು ಜೋಟು! ಪಾರಸಿಕದೇಶ ಒಂದು ಚೂರು! ಶಕಸ್ಥಾನವು ಮೊಲದ ಹೆಜ್ಜೆಯ ಗುರುತು! ಕೊಟ್ಟ ಏಟು ಹಿಂದಿರುಗಿ ಕೊಡಲಾರದ ಪಾರಿಯಾತ್ರಕ್ಕೆ ಮೆಲ್ಲಗೆ ಹೋದರೂ ಸಾಕು! ಶೌರ್ಯಶುಲ್ಕದಿಂದ ದಕ್ಷಿಣಾಪಥವನ್ನು ಸಾಧಿಸಬಹುದು! ದಕ್ಷಿಣ ಸಮುದ್ರದ ಅಲೆಗ- ಮೇಲೆ ತೇಲಿಬಂದ ಚಂದನ ಶಾಖೆಗಳಿಂದ ಸುವಾಸಿತವಾದ ಗುಹಾದೇವಾಲಯಗಳಿರುವ ದರ್ದುರ ಶೈಲವು ಇರುವುದು ಮಲಯಪರ್ವತದ ಬಳಿಯೆ, ಆ ಮಲಯದ ಬಳಿಯಿರುವುದೇ ಮಹೇಂದ್ರ ಪರ್ವತ!"

ಶತ್ರು ಸಂಹಾರಕ್ಕೆ ಮನಮಾಡಿದ್ದ ಹರ್ಷನ ನಿಶ್ಚಯವು ಸಿಂಹ ನಾದನ ಸಲಹೆಯಿಂದಲೂ ಸ್ಕಂದಗುಪ್ತನ ಸೂಚನೆಯಿಂದಲೂ ಖಚಿತ ವಾಗಿತ್ತು. ತನ್ನ ಸಹಚರರಾಗಿ ರಣರಂಗಕ್ಕೆ ಅಡಿಯಿಡುತ್ತಿದ್ದ ಸಾಮಂತರ ಉತ್ಸಾಹವನ್ನು ಅವರ ಬಾಯಿಂದಲೇ ಕೇಳಿದ ಮೇಲಂತೂ, ಹರ್ಷನಿಗೆ ಒಂದು ಮೈ ಹತ್ತು ಮೈಯಾದ ಹಾಗಾಯಿತು. ಅವರೆಲ್ಲರನ್ನೂ ತಕ್ಕಂತೆ ಆದರಿಸಿ ಅವರವರ ಕಟಕಗಳಿಗೆ ಕಳುಹಿಸಿಕೊಟ್ಟು, ಹರ್ಷನು ತನ್ನ ಕಟಕದ ಹೊರಗಡೆ ಆಸನಸ್ಥನಾಗಿ ವಿಶ್ರಮಿಸಿಕೊಳ್ಳುತ್ತಿದ್ದನು.

## ಭಾಸ್ಕರವರ್ಮನ ಸಖ್ಯ

ಹರ್ಷನು ಹೀಗೆ ವಿಶ್ರಮಿಸಿಕೊಳ್ಳುತ್ತಿರಲು, ಪ್ರತೀಹಾರಿಯೊಬ್ಬನು ಬಂದು "ದೇವ! ಪ್ರಾಗ್ಜ್ಯೋತಿಷ (ಅಸ್ಸಾಂ) ಪುರದ ರಾಜಕುಮಾರನು

ಕಳುಹಿಸಿರುವ ಹಂಸವೇಗನೆಂಬ ದೂತನು ದೇವರನ್ನು ಕಾಣಲು ಕಾಯು ತ್ತಿರುವನು'' ಎಂದು ಅರಿಕೆ ಮಾಡಿದನು. ಅವನನ್ನು ಕರೆತರಲು ಹರ್ಷನ ಅಪ್ಪಣೆಯಾಯಿತು. ಹಂಸವೇಗನು ದೂರದಿಂದಲೇ ಹರ್ಷನಿಗೆ ನಮಿಸಿ, ಅನಂತರ ಹತ್ತಿರ ಸಾರಿ ಅವನ ಪಾದಕ್ಕೆ ತಲೆಯಿಟ್ಟು ಪುನಃ ನಮಸ್ಕರಿಸಿ ದನು. ಹರ್ಷನು ಅವನ ಬೆನ್ನು ಸವರಿಸುತ್ತ, ಪ್ರತೀಹಾರಿಯನ್ನು ಹೋಗಕಳುಹಿ, ಬಂದ ಕಾರಣವೇನೆಂದು ಹಂಸವೇಗನನ್ನು ಪ್ರಶ್ನಿಸಿ ದನು; ಕುಮಾರ ಭಾಸ್ಕರವರ್ಮನ ಕುಶಲವನ್ನು ಕೇಳಿದನು.

ಹಂಸವೇಗನು ತನ್ನ ಅರಸನ ಕುಶಲವನ್ನು ತಿಳಿಸಿ, ''ದೇವ! ಭಕ್ತಿಪೂರಿತವಾದ ಹೃದಯವಲ್ಲದೆ ಬೇರೆ ಯಾವ ಕಾಣಿಕೆಯೂ ತಮಗೆ ನೀಡಲು ತಕ್ಕುದಲ್ಲ. ಆದರೂ ನನ್ನ ದೊರೆಯು ತಾನು ಕಳುಹಿಸಿದ ಪ್ರಾರ್ಥನೆಯನ್ನು ಪುಷ್ಟೀಕರಿಸುವ ಸಲುವಾಗಿ ಈ ಶ್ವೇತಚ್ಛತ್ರವನ್ನು, ತಾವೇ ಇದಕ್ಕೆ ಅನುರೂಪರೆಂದು, ತಮಗೆ ಕಳುಹಿಸಿರುವನು. ಆಭೋಗ ವೆಂಬ ಹೆಸರಿನ ಬೆಳ್ಗೊಡೆಯು ವರುಣನು ಕೊಟ್ಟು ಅವರಿಗೆ ವಂಶಪಾರಂ ಪರ್ಯವಾಗಿ ಬಂದುದು ಇದರಲ್ಲಿ ಒಂದು ಮಹತ್ವವುಂಟು. ಈ ಕೊಡೆಯ ನೆರಳಿನಲ್ಲಿ ಶೀತಮರೀಚಿಯು ಕೂಡಿಟ್ಟ ಕಿರಣಗಳು ಒಂದೊಂ ದಾಗಿ ಪ್ರಸರಿಸುವುವು , ಇದರ ಕಡ್ಡಿಗಳಿಂದ ಕೇಳಿದಷ್ಟು ಕಾಲ ಹಿಮ ಜಲದ ಶೀತಲಧಾರೆ ಸುರಿಯುವುದು. ಈ ಕೊಡೆಯನ್ನು ಕೊಟ್ಟ ಸಾಕ್ಷಾತ್ ವರುಣನಂತೆ ಎಲ್ಲ ದಿಕ್ಕುಗಳಿಗೂ ಚಕ್ರವರ್ತಿಯಾದವನು, ಅಥವ ಆಗತಕ್ಕವನು—ಅವನು ಮಾತ್ರ ಇದರ ತಣ್ಣನೆಯ ನೆರಳನ್ನು ಅನುಭೋಗಿಸಬಲ್ಲನು ಇದನ್ನು ಬೆಂಕಿ ಸುಡದು, ನೀರು ತೋಯಿಸದು; ಮಣ್ಣು ಮೆತ್ತಿ ಕೊಳೆಯಾಗದಿದು, ಕಾಲ ಕಳೆಯಲು ಕಂದಿಹೋಗದು ದೇವರು ಇದನ್ನು ನೋಡಬೇಕು. ನಾನು ಬಂದ ಬೆಸನೇನೆಂಬುದನ್ನು ಅಂತರಂಗದಲ್ಲಿ ನಿವೇದಿಸುವೆನು'' ಎಂದು ನುಡಿದು, ಆಭೋಗವನ್ನು ಬಿಚ್ಚಿ ತೋರಿಸುವಂತೆ ತನ್ನ ಕಡೆಯವರಿಗೆ ಆಜ್ಞೆಮಾಡಿದನು.

ಅದರಂತೆ ಅವರು ಅದನ್ನು ಬಿಚ್ಚಿ ಹಿಡಿದೆತ್ತಿದರು. ಅದನ್ನು ಬಿಚ್ಚಿದ ಕ್ಷಣ ಹರನು ನಕ್ಕಂತೆ ಸುತ್ತೆತ್ತಲೂ ಶ್ವೇತಪ್ರಭೆ ಹರಡಿತು. ಉನ್ನತವಾದ ಹಿಡಿಯ ತುದಿಯಲ್ಲಿ ಹರಡಿದ ಆ ಕೊಡೆಯು ಬ್ರಹ್ಮನ

ವಾಹನವಾದ ಹಂಸವು ರೆಕ್ಕೆ ಹರಡಿ ಆಕಾಶದಲ್ಲಿ ನಿಂತಹಾಗಿತ್ತು, ನಾರಾಯಣನ ನಾಭಿಯಿಂದ ಮೇಲೆದ್ದು ಅರಳಿದ ಪದ್ಮದಂತಿತ್ತು, ಮೂರುಲೋಕದ ಹಣೆಯ ಲಾಂಛನದಂತಿತ್ತು; ಶರತ್ಕಾಲದ ಚಂದ್ರನ ಅಂಶಾವತಾರದಂತಿತ್ತು. ಆ ಕೊಡೆಯ ಪರಿವೇಶದ ಅಂಚಿಗೆ ಮಾನಸ ಸರೋವರದ ತಾವರೆದಂಟುಗಳಿಂದ ಮಾಡಿದ ಸಣ್ಣ ಚಾಮರಗಳನ್ನು ಕಟ್ಟಿದ್ದರು. ಮೇಲ ತುದಿಯಲ್ಲಿ, ಚಕ್ರವರ್ತಿ ಲಕ್ಷ್ಮಿಯ ನೂಪುರ ರವಕ್ಕೆ ಕಾಯ್ದು ಕುಳಿತಿರುವಂತೆ ರೆಕ್ಕೆಯನ್ನು ಹರಡಿ ಕುಳಿತಿದ್ದ ಹಂಸದ ಗುರುತಿತ್ತು. ಹೆಡೆ ಮುಚ್ಚಿ ನಡೆತು ನಿಂತ ವಾಸುಕಿಯಂತಿದ್ದ ಆ ಕೊಡೆಯ ಹಿಡಿಯು ಮಂದಾಕಿನೀ ಮೃಣಾಳದಿಂದಾದುದು, ಯಾವುದೋ ಪ್ರಭಾವದಿಂದ ಸ್ತಂಭಿತವಾದುದು ಅದರ ಬಿಳುಪನ್ನು ಕಂಡರೆ ಸರ್ವ-ಮಂಗಳಗಳೂ ಮೇಲೆದ್ದ ಹಾಗಿತ್ತು; ಶ್ರೀಯ ಶ್ವೇತಮಂಟಪದಂತಿತ್ತು; ಬೆಳುದಿಂಗಳಿನ ನಾಭಮಂಡಲದಂತಿತ್ತು; ಕೀರ್ತಿಯ ಬಿಳುಪಾದ ನಗುವಿನಂತಿತ್ತು; ಖಡ್ಗಧಾರಾಜಲದ ಫೇನರಾಶಿಯಂತಿತ್ತು, ಶೌರ್ಯಶಾಲಿತೆಯ ಯಶಃಪಟಲದಂತಿತ್ತು.

ಇಂತಹ ತ್ರೈಲೋಕ್ಯಾದ್ಭುತವಾದ ಮಹಚ್ಛತ್ರವನ್ನು ಹರ್ಷನೂ ಜೊತೆಯ ರಾಜರೂ, ಹಿಡಿಯಿಂದ ಹಿಡಿದು ತುದಿಯವರೆಗೆ, ಚಿತ್ರಿತರಾದವರಂತೆ ನೋಡಿದರು. ಅದನ್ನು ನೋಡಿದನಂತರ ಉಳಿದ ಪ್ರಾಭೃತಗಳನ್ನೂ ನೋಡಿದರು ಆಭರಣ, ಮುತ್ತು, ರತ್ನ, ಬಟ್ಟೆಬರೆ, ತೆರತೆರದ ಓಲೆಗರಿ, ಹಣ್ಣುಹಂಪಲು, ಮೃಗಪಕ್ಷಿ ಮುಂತಾಗಿ ಏನೇನು ಕಳುಹಿಸಬಹುದೋ ಅದೆಲ್ಲವನ್ನೂ ಭಾಸ್ಕರವರ್ಮನು ಕಳುಹಿಸಿದ್ದನು. ಆತನು ಕಳುಹಿಸಿದ ಬೆಳ್ಗೊಡೆಯು ತನ್ನ ದಿಗ್ವಿಜಯ ಪ್ರಯತ್ನಕ್ಕೆ ಶುಭಸೂಚಕವೆಂದು ಸ್ವೀಕರಿಸಿದ ಹರ್ಷನು, ಅಂತೆಯೇ ಮಿಕ್ಕುದನ್ನೂ ಸ್ವೀಕರಿಸಿ, ಹಂಸವೇಗನನ್ನು ವಿಶ್ರಮಿಸಲು ಕಳುಹಿಸಿಕೊಟ್ಟನು

ಅನಂತರ ಹರ್ಷನು ಎದ್ದು, ಮಿಂದು, ಮಂಗಲವನ್ನು ಬಯಸುತ್ತ ಪೂರ್ವದ ಕಡೆಯಿಂದ ಆಭೋಗದ ನೆರಳನ್ನು ಹೊಕ್ಕನು. ಹೊಕ್ಕ ಕ್ಷಣ, ಚಂದ್ರನು ತಲೆಯ ಮೇಲೆ ಇಳಿದಂತೆ, ಚಂದ್ರಕಾಂತಮಣಿಯನ್ನು ಹಣೆಗೆ ಒತ್ತಿದಂತೆ, ಕಣ್ಣಿನ ಮೇಲೆ ಕರ್ಪೂರದ ಧೂಳಿಯನ್ನಿಟ್ಟಂತೆ,

ಹರಿಚಂದನದ ಮಳೆಯು ಎದೆಯ ಮೇಲೆ ಸುರಿದಂತೆ, ಹರ್ಷನು ಅಭೂತ ಪೂರ್ವವಾದ ಶೀತಲತೆಯ ಸುಖವನ್ನು ಅನುಭವಿಸಿದನು. ಅಂತಹ ಕೊಡೆಯನ್ನು ಕಳುಹಿಸಿದವನಿಗೆ ತನ್ನ ಮರಣ ಪರಿಯಂತವಾದ ಮೈತ್ರಿ ಯನ್ನು ಕಳುಹಿಸುವುದೊಂದೇ ತಕ್ಕುದೆಂದು ಹರ್ಷನಿಗೆನಿಸಿತು. ಅದೇ ಮಧ್ಯಾಹ್ನ ಊಟದ ಸಮಯದಲ್ಲಿ ತಾನು ಬಳಸಿ ಮಿಕ್ಕ ಚಂದನವನ್ನು ಬಿಳಿಯ ಪಟ್ಟಿ ಸುತ್ತಿದ ನಾರಿಕೇಳ ಸಂಪುಟದಲ್ಲಿ ಹಂಸವೇಗನಿಗೆ ಕಳು ಹಿಸಿದನು. ಅಲ್ಲದೆ, ತಾನು ಮುಟ್ಟಿದ ಒಂದು ಜೊತೆ ಬಟ್ಟೆಯನ್ನೂ, ಪದ್ಮರಾಗದ ಕುಚ್ಚು ಕಟ್ಟಿದ ಪರಿವೇಶವೆಂಬ ಹೆಸರಿನ ಕಟಿಬಂಧವನ್ನೂ, ತರಂಗಕವೆಂಬ ಕರ್ಣಾಭರಣವನ್ನೂ, ಸೊಗಸಾದ ಭೋಜನವನ್ನೂ ಅದರೊಡನೆಯ ಕಳುಹಿಸಿಕೊಟ್ಟನು ಈ ರೀತಿಯಲ್ಲಿ ಅಂದಿನ ಹಗಲು ಮುಗಿಯಿತು, ಸಂಜೆಯೂ ಕಳೆದು ರಾತ್ರಿಯಾಗಿ ಬೆಳುದಿಂಗಳು ಬಂತು.

ಆ ವೇಳೆಯಲ್ಲಿ ಹರ್ಷನು ಸೇವಕನನ್ನು ಹೋಗ ಕಳುಹಿ, ಹಂಸ ವೇಗನೊಡನೆ ಏಕಾಂತದಲ್ಲಿ ಕುಳಿತನು. ಹಂಸವೇಗನು ದೊರೆಗೆ ನಮ ಸ್ಕರಿಸಿ ತಾನು ಬಂದ ಕಾರ್ಯವನ್ನು ನುಡಿದನು :

"ದೇವ, ಪೂರ್ವಕಾಲದಲ್ಲಿ ವರಾಹಾವತಾರಿಯಾದ ನಾರಾಯಣ ನಿಗೂ ಪೃಥ್ವೀದೇವಿಗೂ ನರಕನೆಂಬ ಮಗ ಜನಿಸಿದನು ಅವನು ಸೂರ್ಯ ಚಂದ್ರರನ್ನು ಕೂಡ ನಡುಗಿಸಿ, ವರುಣನಿಗೆ ಎರಡನೆಯ ಜೀವದಂತಿದ್ದ ಈ ಕೊಡೆಯನ್ನು ಪಡೆದನು. ಆ ವೀರನ ವಂಶದಲ್ಲಿ ಭಗದತ್ತ, ಪುಷ್ಪ ದತ್ತ, ವಜ್ರದತ್ತ ಮುಂತಾದ ಮಹಾಪುರುಷರಾದ ಮಹಾರಾಜರು ಆಗಿ ಹೋದರು ಅದೇ ವಂಶದಲ್ಲಿ ವೀರಾಧಿವೀರನಾಗಿ ಮಹಾರಾಜಾಧಿರಾಜ ನೆನಿಸಿದ ಸುಸ್ಥಿರವರ್ಮನು ಭವಿಸಿದನು. ಅವನಿಗೂ ಅವನ ಪತ್ನಿಯಾದ ಶ್ಯಾಮಾದೇವಿಗೂ, ಶಂತನು ಭಾಗೀರಥಿಯರಿಗೆ ಭೀಷ್ಮನು ಹುಟ್ಟಿದಂತೆ ಭಾಸ್ಕರವರ್ಮನು ಮಗನಾಗಿ ಅವತರಿಸಿದನು. ಈ ಭಾಸ್ಕರದ್ಯುತಿಯೇ ನನ್ನನ್ನು ತಮ್ಮ ಬಳಿ ಕಳುಹಿಸಿರುವುದು. ಶಿವನ ಹೊರತು ಅನ್ಯ ದೈವಕ್ಕೆ ಪೂಜೆಮಾಡನೆಂದು ಈತನು ಬಾಲ್ಯದಿಂದ ಸಂಕಲ್ಪ ಮಾಡಿರು ವನು. ಮೂರು ಲೋಕಗಳಲ್ಲಿಯೂ ದುರ್ಲಭವಾದ ಇಂತಹ ಮನೋರಥ ವನ್ನು ಸಂಪಾದಿಸಲು ಸಕಲ ಭುವನವನ್ನು ಜಯಿಸಬೇಕು; ಇಲ್ಲವೆ

ಪ್ಪತಿಹೊಂದಬೇಕು, ಇಲ್ಲದಿದ್ದರೆ ಪ್ರಚಂಡ ಪ್ರತಾಪದಿಂದ ದೆಸೆಗಳನ್ನು ನಡೆಸುವ ತಮ್ಮಂತಹ ಜಗದೇಕವೀರರ ಮಿತ್ರತ್ವವನ್ನು ಪಡೆಯಬೇಕು, ಈ ಮೂರಲ್ಲದೆ ಬೇರೆ ದಾರಿಯಿಲ್ಲ. ದೊರೆ ದೊರೆಗಳ ಮೈತ್ರಿಯಿಂದ ಏನಾದರೂ ಪ್ರಯೋಜನವಾಗಬೇಕು, ನಿಜ. ಆದರೆ ತಮಗೆ ನಮ್ಮಿಂದ ಏನು ಪ್ರಯೋಜನ ಬೇಕಾದೀತು? ಆದರೂ ನಮ್ಮ ದೊರೆ ಕೇಳು ವುದಿಷ್ಟು: ರಾಮ ಕುಬೇರರ, ಇಂದ್ರ ದಶರಥರ, ಧನಂಜಯ ಕೃಷ್ಣರ, ಕರ್ಣ ದುರ್ಯೋಧನರ ಮೈತ್ರಿಯಂತಹ ಮೈತ್ರಿ ತಮಗೂ ತನಗೂ ಬೆಳೆಯಬೇಕು; ಮಿತ್ರತ್ವದ ಹೆಸರಿನ ಮರೆಯಲ್ಲಿ ಬಂದ ಈ ದಾಸ್ಯವನ್ನು ತಾವು ಸ್ವೀಕರಿಸಬೇಕು. ಇದೆ ನಾನು ತಂದ ಸುದ್ದಿ. ಇದಕ್ಕೆ ತಮ್ಮ ಉತ್ತರವೇನೆಂಬುದನ್ನು ಅನುಗ್ರಹಿಸಿ ತಿಳಿಸಬೇಕು.''

ಭಾಸ್ಕರವರ್ಮನ ಗುಣಾತಿಶಯಗಳನ್ನು ಹರ್ಷನು ಮುಂಚೆಯೇ ಕೇಳಿದ್ದನು. ಅವನಿಗೆ ಭಾಸ್ಕರವರ್ಮನಲ್ಲಿ ಗೌರವವಿತ್ತು. ಆಭೋಗ ವನ್ನು ಪಡೆದ ಮೇಲೆ ಅವನಲ್ಲ ವಿಶ್ವಾಸ ಮೂಡಿತ್ತು. ಅದರಿಂದ ಹಂಸ ವೇಗನ ಕಡೆ ತಿರುಗಿ '' ಹಂಸವೇಗ! ನಿನ್ನ ಅರಸನು ಸತ್ಕುಲ ಪ್ರಸೂತನು, ಗುಣಾಗ್ರಣಿಯು, ಮಹಾತ್ಮನು. ಅಂತಹವನ ಸಖ್ಯವನ್ನು ನಾನು ಕನಸಿನಲ್ಲಿಯಾದರೂ ತಿರಸ್ಕರಿಸಿಯೇನೆ? ಕುಮಾರನ ಸಂಕಲ್ಪವು ಸಾಧು ವಾದುದು. ಸ್ವಯಂ ಬಾಹುಶಾಲಿಯಾದ ತಾನು ಧನುರ್ಧಾರಿಯಾದ ನನ್ನೊಡನೆ ಸಖ್ಯಮಾಡಿದ ಮೇಲೆ, ಶಿವನಲ್ಲದೆ ಬೇರಾವ ದೇವರಿಗೆ ನಮಿಸಬೇಕು? ಆತನ ಈ ಸಂಕಲ್ಪವು ನನ್ನ ಪ್ರೀತಿಯನ್ನು ಹೆಚ್ಚಿಸು ತ್ತಿದೆ. ಹಂಸವೇಗ, ಕುಮಾರನನ್ನು ದರ್ಶಿಸಲು ಉತ್ಕಂಠಿತನಾಗಿರುವ ನನ್ನ ಕ್ಲೇಶವು ಬಹುಕಾಲ ನಿಲ್ಲದಿರುವಂತೆ ಮಾಡುವ ಭಾರ ನಿನ್ನದು" ಎಂದನು.

ಅದಕ್ಕೆ ಹಂಸವೇಗನು '' ದೇವ, ಸಂತರು ಯಾವಾಗಲೂ ಸೇವೆಗೆ ನಾಚುವರು. ಅದರಲ್ಲೂ ಅಹಂಕಾರಧನನಾದ ವೈಷ್ಣವವಂಶದ ಭಾಸ್ಕರ ವರ್ಮನಿಗೆ ಇದು ವಿಶೇಷ. ಗಂಡನು ಒಂದು ಕ್ಷಣವಾದರೂ ಗಂಡಸಿನಂತೆ ಬದುಕಿರುವುದು ಮೇಲು; ಮೂರುಲೋಕಗಳ ಒಡೆತನ ಲಭಿಸುವು ದಾದರು ಕೂಡ, ಅದಕ್ಕಾಗಿ ನಮಿಸಬಾರದೆಂದು ತಿಳಿದವರು ಹೇಳುವರು.

ಆದ ಕಾರಣ ತಾವು ನಮ್ಮ ಪ್ರೇಮಕ್ಕೆ ಅಭಿನಂದಿಸಿ, ಪ್ರಾಗ್ಜ್ಯೋತಿಷೇಶ್ವರನು ಕೆಲವು ದಿನಗಳ ಹಿಂದೆ ದಿವಂಗತನಾದನೆಂಬುದನ್ನು ಮನಸ್ಸಿನಲ್ಲಿಡಬೇಕು" ಎಂದು ತಂದೆಯನ್ನು ಕಳೆದುಕೊಂಡ ಕುಮಾರನ ಕ್ಷೇಮವು ಹರ್ಷನ ಕೈಲಿದೆಯೆಂದು ಅರ್ಥಬರುವ ಮಾತನಾಡಿ, ಸುಮ್ಮನಾದನು.

ಪ್ರಾಗ್ಜ್ಯೋತಿಷ ರಾಜಕುಮಾರನನ್ನು ಕಾಣಲು ಕಾತರಿಸುತ್ತ, ಹರ್ಷನು ಆ ರಾತ್ರಿ ಕಳೆದನು. ಹಂಸವೇಗನು ಮಾರನೆಯ ದಿನ ಪ್ರತಿ ಪ್ರಾಭೃತಗಳನ್ನು ಸ್ವೀಕರಿಸಿ ತನ್ನ ದೊರೆಯಿಡೆಗೆ ಹಿಂದಿರುಗಿದನು. ಹರ್ಷನು, ಅಲ್ಲಿಂದ ಪಾಳೆಯವನ್ನು ಎತ್ತಿಸಿ, ಮುಂದೆ ಮುಂದೆ ಶತ್ರುಗಳ ಮೇಲೆ ನಡೆದುಹೋದನು.

## ರಾಜ್ಯಶ್ರೀ ವೃತ್ತಾಂತ

ಹೀಗಿರಲು, ಒಂದು ದಿನ ಓಲೆಯ ದೂತನೊಬ್ಬನು ಹರ್ಷನನ್ನು ಸಮೀಪಿಸಿ, "ದೇವ, ರಾಜ್ಯವರ್ಧನನ ಬಾಹುಪರಾಕ್ರಮದಿಂದ ಪರಾಜಿತರಾದ ಮಾಳವಾಧಿಪನ ಮಹಾ ಸೇನೆಯೊಡನೆ ಭಣ್ಡಿಯು ಬರುತ್ತಿರುವನು; ಇಲ್ಲಿಯೇ ಬಳಿಯಲ್ಲಿ ತಂಗಿರುವನು" ಎಂದು ನಿವೇದಿಸಿದನು. ರಾಜ್ಯವರ್ಧನನ ಹೆಸರು ಕೇಳಿ ಹರ್ಷನ ದುಃಖ ಮರುಕೊಳಿಸಿತು, ಅವನ ಸ್ಥೈರ್ಯ ಸಿಡಿಯಿತು. ಎಲ್ಲ ಕರ್ತವ್ಯಗಳನ್ನೂ ಬಿಟ್ಟು, ಭಣ್ಡಿಯ ಆಗಮನವನ್ನು ನಿರೀಕ್ಷಿಸುತ್ತ, ಹರ್ಷನು ಏಕಾಂತದಲ್ಲಿ ಕುಳಿತು ದುಃಖಿಸುತ್ತಿದ್ದನು.

ಸ್ವಲ್ಪ ಹೊತ್ತಿನಲ್ಲಿಯೇ ಭಣ್ಡಿ ಬಂದನು. ಧೂಳು ಮುಚ್ಚಿದ ಅವನ ಬಟ್ಟೆ, ಕೃಶಿಸಿ ಕಾಂತಿಹೀನವಾಗಿದ್ದ ಅವನ ಮೈ, ಅವನ ದುಃಖವನ್ನು ಸೂಚಿಸುತ್ತಿದ್ದುವು. ಹರ್ಷನ ಎದುರಿಗೆ ಅವನಿಗೆ ದುಃಖದ ಭಾರ ದುಸ್ಸಹವಾಯಿತು; ಹಾಗೆಯೇ ಕೆಳಗುರುಳಿ ಮೂರ್ಛೆಹೋದನು. ಹರ್ಷನು ಅವನನ್ನು ಹಿಡಿದು ಮೇಲೆತ್ತಿ ತಬ್ಬಿಕೊಂಡನು. ಇಬ್ಬರೂ ರಾಜ್ಯವರ್ಧನನನ್ನು ನೆನೆನೆನೆದು ದೀರ್ಘಕಾಲ ಗೋಳಾಡಿದರು. ಹರ್ಷನು ಅಣ್ಣನ ಕಡೆಯ ದಿನಗಳ ವೃತ್ತಾಂತವನ್ನು ಪ್ರಶ್ನಿಸಿದನು. ಭಣ್ಡಿಯು

ಅವನ್ನು ಸವಿಸ್ತಾರವಾಗಿ ತಿಳಿಸಿದನು ಮುಂದೆ ರಾಜ್ಯಶ್ರೀಯ ವಾರ್ತೆಯೇ ನೆಂದು ಮೊರೆ ಕೇಳಿದನು.

“ದೇವ! ಮಹಾರಾಜ ರಾಜ್ಯವರ್ಧನನು ಮೃತನಾದಮೇಲೆ ಕನ್ಯಾಕುಬ್ಜವನ್ನು ಗುಪ್ತನೆಂಬವನು ಆಕ್ರಮಿಸಿದನಂತೆ. ಆಗ ರಾಜ್ಯಶ್ರೀ ದೇವಿಯು ಬಂಧನದಿಂದ ತಪ್ಪಿಸಿಕೊಂಡು, ತನ್ನ ಪರಿವಾರದೊಡನೆ ವಿಂಧ್ಯಾರಣ್ಯಕ್ಕೆ ಓಡಿದಳಂತೆ. ಇದು ಜನರಾಡುವ ಮಾತು. ಅವಳನ್ನು ಹುಡುಕಿ ತರಲು ನಾನೂ ಅನೇಕ ದೂತರನ್ನು ಕಳುಹಿಸಿದೆನಾದರೂ, ಇನ್ನೂ ಯಾರೂ ಹಿಂದಿರುಗಿ ಬಂದಿಲ್ಲ” ಎಂದು ಭಂಡಿ ತಿಳಿಸಿದನು.

ಅದಕ್ಕೆ ಹರ್ಷನು “ನಾನು ಇರುವಾಗ, ರಾಜ್ಯಶ್ರೀಯನ್ನು ಹುಡುಕಲು ಬೇರೆಯವರೇಕೆ? ನನ್ನ ಇತರ ಕಾರ್ಯಗಳೆಲ್ಲ ಹಾಗಿರಲಿ, ಅವಳು ಹೋಗಿರುವಲ್ಲಿಗೆ ನಾನೇ ಹೋಗುವೆನು. ಭಂಡಿ, ನೀನು ಈ ಸೇನೆಯೊಡನೆ ಗೌಡದೇಶದ ಮೇಲೆ ದಂಡೆತ್ತಿ ಹೊರಡು ಮಾಳವದ ವಿಜಯದಿಂದ ದೊರೆತ ಈ ಸರ್ವವನ್ನೂ ರಾಜಧಾನಿಗೆ ಕಳುಹಿಸು” ಎಂದು ನುಡಿದು, ತಂಗಿಯನ್ನು ಹುಡುಕುವ ಸಲುವಾಗಿ ಮಾರನೆಯ ದಿವಸ ವಿಂಧ್ಯಾರಣ್ಯಕ್ಕೆ ನಡೆದನು. ನಡೆದು, ಕೆಲವೇ ದಿನಗಳಲ್ಲಿ ಆ ಅರಣ್ಯವನ್ನು ಪ್ರವೇಶಿಸಿದನು.

## ವಿಂಧ್ಯದಲ್ಲಿ ರಾಜ್ಯಶ್ರೀಯ ಅನ್ವೇಷಣೆ

ಹರ್ಷನು ಅನೇಕ ದಿನಗಳು ವಿಂಧ್ಯಾರಣ್ಯದಲ್ಲಿ ಅಲೆದಾಡಿದನು, ಆದರೂ ರಾಜ್ಯಶ್ರೀಯ ಸುಳಿವೇ ಸಿಕ್ಕಲಿಲ್ಲ. ಒಂದು ದಿನ ಶರಭಕೇತು ವೆಂಬ ಆ ಅಡವಿಯ ಸಾಮಂತರಾಜನ ಮಗನಾದ ವ್ಯಾಘ್ರಕೇತುವೆಂಬವನು ಒಬ್ಬ ಶಬರ ಯುವಕನನ್ನು ಹರ್ಷನ ಬಳಿ ಕರೆತಂದನು. ಆ ಯುವಕನ ಹೆಸರು ನಿರ್ಘಾತ. ಅವನು ಸರ್ವವಿಂಧ್ಯದ ಸ್ವಾಮಿಯಾದ ಶಬರ ಸೇನಾಪತಿ ಭೂಕಂಪನ ಸೋದರಿಯ ಮಗ. ವಿಂಧ್ಯಾರಣ್ಯದಲ್ಲಿ ಅವನಿಗೆ ಗೊತ್ತಿಲ್ಲದ ಸ್ಥಳವೇ ಇರಲಿಲ್ಲ. ರಾಜ್ಯಶ್ರೀಯನ್ನು ಹುಡುಕಲು ಅವನಿಂದ ಸಹಾಯವಾದೀತೆಂದು ವ್ಯಾಘ್ರಕೇತುವು ಅವನನ್ನು ಹರ್ಷನ ಬಳಿ ಕರೆತಂದನು.

ನಿರ್ಘಾತನು ಭಕ್ತಿಯಿಂದ ಸಮಿಸಿ ಒಪ್ಪಿಸಿದ ಮೊಲ ಪಾರಿವಾಳ
ಗಳನ್ನು ಸ್ವೀಕರಿಸಿ, ಹರ್ಷನು ''ಅಯ್ಯಾ! ನಿನಗೆ ಈ ಎಲ್ಲ ಸ್ಥಳವೂ ಪರಿ
ಚಿತವು. ನೀನು ಇಲ್ಲೆಲ್ಲ ಸುತ್ತುತ್ತಿರುವೆ. ನೀನಾಗಲಿ ನಿನ್ನ ಅನುಚರ
ರಾಗಲಿ ಉದಾರರೂಪಿಯಾದ ನಾರಿಯೊಬ್ಬಳನ್ನು ಈ ಕಾಡಿನಲ್ಲಿ ಕಂಡು
ದುಂಟೆ?'' ಎಂದು ಪ್ರಶ್ನಿಸಿದನು. ಆ ಪ್ರಶ್ನೆಗೆ ಪ್ರಸನ್ನನಾಗಿ ನಿರ್ಘಾತನು
''ದೇವ! ನಮ್ಮ ಕಣ್ಣಿಗೆ ಕಾಣದೆ ಒಂದು ಜಿಂಕೆ ಕೂಡ ಇಲ್ಲಿ ಸುಳಿಯ
ಲಾರದು. ಆದರೂ ತಮ್ಮ ಆಜ್ಞೆಯಂತೆ ಸದಾ ಹುಡುಕುತ್ತಿರುವೆವು.
ಇಲ್ಲಿಂದ ಯೋಜನ ದೂರದಲ್ಲಿರುವ ವನದಲ್ಲಿ ದಿವಾಕರಮಿತ್ರನೆಂಬ
ಸಂನ್ಯಾಸಿಯೊಬ್ಬನಿರುವನು. ಅವನಿಗೇನಾದರೂ ಸುದ್ದಿ ತಿಳಿದಿದ್ದರೆ ತಿಳಿ
ದಿರಬಹುದು'' ಎಂದನು

ದಿವಾಕರಮಿತ್ರನ ಹೆಸರು ಕೇಳಿ ಹರ್ಷನಿಗೆ ಏನೋ ಜ್ಞಾಪಕ
ಬಂತು ಗತಿಸಿದ ಗ್ರಹವರ್ಮನ ಬಾಲ್ಯಸ್ನೇಹಿತನೊಬ್ಬನು ವೇದಾ
ಧ್ಯಯನಗಳನ್ನು ತೊರೆದು, ಬೌದ್ಧ ಧರ್ಮವನ್ನು ಅಂಗೀಕರಿಸಿ ಭಿಕ್ಷು
ವಾದನೆಂದು ಹರ್ಷನು ಹಿಂದೆ ಕೇಳಿದ್ದನು ಬೌದ್ಧನಾಗಿ ದಿವಾಕರ
ಮಿತ್ರನೆಂದು ಪ್ರಸಿದ್ಧನಾದ ಆ ಮುನಿಶ್ರೇಷ್ಠನನ್ನು ಕಾಣಬೇಕೆಂದು
ಹರ್ಷನು ಅಂದಿನಿಂದ ಹಾರೈಸುತ್ತಿದ್ದನು ಆ ದರ್ಶನಕ್ಕೆ ಇಂದು ಯೋಗ
ಬಂದ ಹಾಗಾಯಿತು. ತನ್ನ ತಂಗಿಯ ಸುದ್ದಿಯನ್ನು ಅವನು ತಿಳಿ
ದಿದ್ದರೂ ತಿಳಿದಿರಬಹುದೆಂದು ಆಶಿಸುತ್ತ, ಹರ್ಷನು ನಿರ್ಘಾತನೊಡನೆ
ದಿವಾಕರಮಿತ್ರನ ಆಶ್ರಮಕ್ಕೆ ನಡೆದನು

ಆಶ್ರಮದ ಹತ್ತಿರ ಬಂದು ಹರ್ಷನು ಕುದುರೆಯಿಂದ ಇಳಿದನು;
ಬಳಿಯ ಹೊಳೆಯಲ್ಲಿ ಆಚಮನ ಮಾಡಿ, ಅಶ್ವಸೇನೆಯನ್ನು ನಿಲ್ಲಿಸಿ,
ಸ್ವಲ್ಪ ಪರಿವಾರದೊಡನೆ ಕಾಲುನಡಿಗೆಯಲ್ಲಿಯೆ ಹೊರಟು ದಿವಾಕರ
ಮಿತ್ರನ ಸನ್ನಿಧಿಗೆ ಬಂದನು.

ಶಾಂತಮೂರ್ತಿಯಾದ ದಿವಾಕರ ಮಿತ್ರನ ತೇಜಸ್ಸನ್ನು ಕಂಡು
ಹರ್ಷನು ಅವನಿಗೆ ಪೂಜ್ಯಭಾವದಿಂದ ನಮಸ್ಕರಿಸಿದನು. ದೊರೆಯ
ಗಾಂಭೀರ್ಯವನ್ನೂ ಘನತೆಯನ್ನೂ ಕಂಡುಕೊಂಡ ಸಂನ್ಯಾಸಿಯು ಅವ

ನಿಗೆ ಪಾದ್ಯವನ್ನು ನೀಡಿ ಉಪಚರಿಸಿದನು. ಉಚಿತೋಪಚಾರಗಳಿಂದ ಇಬ್ಬರೂ ಒಬ್ಬರನ್ನೊಬ್ಬರು ಆರಾಧಿಸಿದಮೇಲೆ, ಹರ್ಷನು ತಾನು ಬಂದ ಕಾರಣವನ್ನು ತಿಳಿಸಿದನು. ಆದರೆ ದಿವಾಕರಮಿತ್ರನಿಗೆ ರಾಜ್ಯಶ್ರೀ ವೃತ್ತಾಂತವೇನೂ ಗೊತ್ತಿರಲಿಲ್ಲ. ತಾನು ಸಂತೋಷದ ಸುದ್ದಿಯನ್ನು ತಿಳಿಸಿ ಹರ್ಷನನ್ನು ಹರ್ಷಗೊಳಿಸಲಾರದುದಕ್ಕಾಗಿ ದಿವಾಕರಮಿತ್ರನು ಖಿನ್ನನಾದನು.

ಆ ವೇಳೆಗೆ ಬಗೆ ಬೆದರಿದ ಬೌದ್ಧ ಸಂನ್ಯಾಸಿಯೊಬ್ಬನು ಗುರುವಿನ ಬಳಿಗೆ ಓಡಿ ಬಂದು "ಆರ್ಯ, ಇದು ವ್ಯಸನದ ವಾರ್ತೆ! ಮಹಾನುಭಾವೆಯಾದ ಯುವತಿಯೊಬ್ಬಳು ಅಗ್ನಿಪ್ರವೇಶಕ್ಕೆ ಸಿದ್ಧಳಾಗುತ್ತಿರುವಳು. ಅವಳ ತಂದೆ ತಾಯಿ ಮೃತರಾದರಂತೆ; ಅವಳ ಪತಿ ವಧೆಯಾದನಂತೆ; ಅಣ್ಣಂದಿರು ವಿಚಾರಿಸದೆ ಮರೆಯಾದರಂತೆ. ಹೀಗೆ ಬಾಂಧವರು ಯಾರೂ ಇಲ್ಲದೆ, ಶತ್ರುಗಳಿಂದ ಅವಮಾನಿತಳಾಗಿ, ಆಕೆಯು ಬಹಳ ನೊಂದು, ಯಾರೇನು ಹೇಳಿದರೂ ಕೇಳದೆ ಬೆಂಕಿಯಲ್ಲಿ ಜೀವ ನೀಗಲು ಸಿದ್ಧಳಾಗಿದ್ದಾಳೆ. ಅನುಕಂಪವೇ ಅವತರಿಸಿ ಬಂದಂತಿರುವ ತಾವು ಆಕೆಯನ್ನು ಸಮಾಧಾನಪಡಿಸಬೇಕು, ಈ ವ್ಯರ್ಥವಾದ ಜೀವನಾಶವನ್ನು ನಿಲ್ಲಿಸಬೇಕು" ಎಂದು ಕನಿಕರದಿಂದ ಬೇಡಿಕೊಂಡನು.

ಆ ಮಾತಿನಲ್ಲಿ ರಾಜ್ಯಶ್ರೀಯ ಹೆಸರು ಕೇಳಿಬರದಿದ್ದರೂ, ಆ ಮಹಾನುಭಾವೆ ರಾಜ್ಯಶ್ರೀಯೇ ಇರಬೇಕೆಂದು ಹರ್ಷನಿಗೆನಿಸಿತು, ಆ ಸಂನ್ಯಾಸಿಯು ಬೇಡಿದುದನ್ನೇ ತಾನೂ ಬೇಡುತ್ತ, ದಿವಾಕರಮಿತ್ರನಿಗೆ ಶರಣಾದನು. ದಿವಾಕರಮಿತ್ರನು ಶರಣನಾದ ಹರ್ಷನನ್ನು ಕರೆದುಕೊಂಡು, ಅಗ್ನಿಪ್ರವೇಶ ನಡೆಯುವ ಕಡೆಗೆ ಹೊರಟನು. ಸುದ್ದಿ ತಂದ ಶಿಷ್ಯನು ಅವರಿಗೆ ದಾರಿ ತೋರಿಸುತ್ತ ನಡೆದನು.

## ರಾಜ್ಯಶ್ರೀ ಪ್ರಾಪ್ತಿ

ಅವರು ಬರುವ ವೇಳೆಗೆ ರಾಜ್ಯಶ್ರೀ ಅಗ್ನಿಯನ್ನು ಹುಗಲು ಸಿದ್ಧಳಾಗಿ ನಿಂತಿದ್ದಳು. ತಂದೆ ತಾಯಿಯನ್ನು ನೆನೆದು ಅಳುತ್ತಿದ್ದಳು. ಗಂಡನನ್ನು ಜ್ಞಾಪಿಸಿಕೊಂಡು ಗೋಳಾಡಿ, ಅಣ್ಣಂದಿರನ್ನು ಸ್ಮರಿಸಿ ಮರುಗಿದಳು.

ಅತ್ತು ಅತ್ತು ಸಾಕಾಯಿತು; ಆದರೂ ಅಳು ನಿಲ್ಲವೊಲ್ಲದು. ತನ್ನ ಪರಿವಾರದ ಪ್ರತಿಯೊಬ್ಬರಿಗೂ ಹೋಗಿ ಬರುವೆನೆಂದು ಹೇಳಿ ಅಗ್ನಿಯ ಕಡೆ ಕಾಲಿಟ್ಟಳು.

ಆ ವೇಳೆಗೆ ಅವಳ ಎಡಗಣ್ಣು ಅದುರಿ ಶುಭವನ್ನು ಸೂಚಿಸಿತು. ಮೈಯಲ್ಲಿ ರೋಮಾಂಚವಾಯಿತು. ಏನೋ ಒಂದು ತೆರದ ಆನಂದವಾಗಿ ಎದೆ ಹಿಗ್ಗಿತು. ದೂರದಲ್ಲಿ ಕುದುರೆ ಕೆನೆದುದು ಕೇಳಿಬಂತು. ಎದುರಿಗೆ ಎತ್ತರವಾದ ಬೆಳ್ಗೊಡೆ ಕಾಣಿಸಿತು. ರಾಜ್ಯಶ್ರೀಯು, ತನ್ನೆದುರಿಗೆ ತ್ವರೆಯಿಂದ ಬರುತ್ತಿದ್ದ ಹರ್ಷನನ್ನು ಕಂಡು, ತನ್ನ ಕಣ್ಣನ್ನೇ ತಾನು ನಂಬಲಾರದೆ ನಿಂತಳು. ಅದುವರೆಗೆ ಕಾಡುತ್ತಿದ್ದ ವಿಪರೀತ ದುಃಖಕ್ಕೆ ಬದಲಾಗಿ ಸಂತೋಷವು ಒಮ್ಮೆಗೇ ಅಧಿಕವಾಗಲು, ರಾಜ್ಯಶ್ರೀಯು ಆ ಭಾರವನ್ನು ತಡೆಯಲಾರದೆ ಮೂರ್ಛಿತಳಾದಳು.

ಹರ್ಷನು ಮೂರ್ಛಿತಳಾದ ತಂಗಿಯನ್ನು ಎತ್ತಿ ತೊಡೆಯ ಮೇಲಿಟ್ಟುಕೊಂಡು ಉಪಚರಿಸಿದನು. ಸ್ವಲ್ಪ ವೇಳೆಯಲ್ಲಿ ಅವಳ ಮೂರ್ಛೆ ತಿಳಿಯಿತು. ಇನ್ನೆಂದೂ ಕಾಣೆನೆಂದು ತೀರ ನಿರಾಶೆಗೊಂಡಿದ್ದ ಅಣ್ಣನ ಮುಖವನ್ನು ಕಂಡು ಅವಳ ದುಃಖತಟಾಕದ ಅಣೆಕಟ್ಟು ಕಿತ್ತು ಹೋಯಿತು. ರಾಜ್ಯಶ್ರೀಯು ಅಣ್ಣನ ಕುತ್ತಿಗೆಯನ್ನು ಬಿಗಿಯಾಗಿ ತಬ್ಬಿಕೊಂಡು ಗಳಗಳನೆ ಅಳತೊಡಗಿದಳು. ಪರಿವಾರದವರೂ ದಿವಾಕರಮಿತ್ರನೂ ಆಕೆಯ ಅಳುವನ್ನು ಕಡಿಮೆ ಮಾಡಲು ಎಷ್ಟು ಯತ್ನಿಸಿದರೂ ಆಗಲಿಲ್ಲ. ಕಡೆಗೆ, ಕಾಲಕಳೆದಂತೆ ಅವಳ ಅಳು ಸಮಾಧಾನವಾಯಿತು.

ಆಗ ದಿವಾಕರಮಿತ್ರನ ಶಿಷ್ಯನು ಗುರುವಿನ ಆಜ್ಞೆಯಂತೆ ಒಂದು ಪದ್ಮ ಪತ್ರದಲ್ಲಿ ನೀರು ತಂದನು. ಹರ್ಷನು ಆ ನೀರಿನಿಂದ ತನ್ನ ತಂಗಿಯ ಕಣ್ಣು ತೊಳೆದು ತಾನೂ ಮುಖ ತೊಳೆದುಕೊಂಡನು. ಮುಖ ತೊಳೆದುಕೊಂಡು "ತಂಗಿ, ರಾಜ್ಯಶ್ರೀ, ಈ ಮಹಾತ್ಮನಿಗೆ ನಮಿಸು. ಈತನು ನಿನ್ನ ಪತಿಯ ಬಾಲ್ಯಸ್ನೇಹಿತನಾಗಿದ್ದವನು; ಈಗ ನಮ್ಮ ಗುರು" ಎಂದು ಅವಳನ್ನು ದಿವಾಕರಮಿತ್ರನಿಗೆ ಪೊಡಮಡಿಸಿದನು. ಆ ಅಣ್ಣ ತಂಗಿಯರ ಸ್ಥಿತಿ ಕಂಡು ದಿವಾಕರಮಿತ್ರನ ಕಣ್ಣಲ್ಲಿಯೂ ನೀರು

ಬರುವ ಹಾಗಾಯ್ತು. ಅದನ್ನು ಹಾಗೆಯೇ ಅಡಗಿಸಿಕೊಂಡು, ಅವರನ್ನು ಸ್ನಾನ ಮಾಡಿಬನ್ನಿರೆಂದು ಕಳುಹಿಸಿಕೊಟ್ಟನು.

ಸ್ನಾನವಾಯಿತು, ಹರ್ಷನು ತಂಗಿಗೆ ಆದರದಿಂದ ಊಟ ಮಾಡಿಸಿ ಅನಂತರ ತಾನು ಊಟಮಾಡಿದನು. ಆಮೇಲೆ ಅನುಚರರಿಂದ ರಾಜ್ಯಶ್ರೀ ವೃತ್ತಾಂತವನ್ನು ಕೇಳುತ್ತ ಕುಳಿತನು. ಅದೇ ಸಮಯಕ್ಕೆ ದಿವಾಕರಮಿತ್ರನು ಅಲ್ಲಿ ಬಂದು, ಅವರ ಮಾತು ಮುಗಿಯುವವರೆಗೆ ಸುಮ್ಮನೆ ಕುಳಿತಿದ್ದು, ಅನಂತರ ಹರ್ಷನಿಗೆ ಒಂದು ಮುತ್ತಿನ ಹಾರವನ್ನು ಒಪ್ಪಿಸಿದನು. ಒಪ್ಪಿಸಿ, "ಮಹಾರಾಜ! ಸುರಗುರುವಾದ ಬೃಹಸ್ಪತಿಯ ಪತ್ನಿಯನ್ನು ಹಿಂದೆ ಚಂದ್ರನು ಅಪಹರಿಸಿದುವನ್ನು ನೀನು ಬಲ್ಲೆಯಷ್ಟೆ. ಆಕೆಯನ್ನು ಅವನು ಬೃಹಸ್ಪತಿಗೆ ಪುನಃ ಒಪ್ಪಿಸಬೇಕಾಯಿತೆಂಬುದನ್ನೂ ನೀನು ಬಲ್ಲೆ. ಒಂದು ದಿನ ಚಂದ್ರನಿಗೆ ಅವಳ ನೆನಪು ಬಂತು. ಆಗ ಕಣ್ಣಿನಲ್ಲಿ ಮೂಡಿದ ನೀರು ಜಾರಿ ಕೆಳಗೆ ಕಡಲಿನಲ್ಲಿ ಬಿದ್ದು ಮುತ್ತಾದುವು. ಆ ಮುತ್ತುಗಳನ್ನು ನಾಗರಾಜನಾದ ವಾಸುಕಿಯು ಪಡೆದನು; ಅದೇ ಮುತ್ತುಗಳನ್ನು ಹಾರ ಮಾಡಿ ಅದಕ್ಕೆ ಮಂದಾಕಿನೀ ಎಂದು ಹೆಸರಿಟ್ಟನು. ಓಷಧೀಶನಾದ ಚಂದ್ರನ ಪ್ರಭಾವದಿಂದ, ಆ ಮುಕ್ತಾವಲಿಯು ಎಲ್ಲ ವಿಷಗಳಿಗೂ ಪ್ರತ್ಯೌಷಧವಾಯಿತು. ತನ್ನ ವಿಷದ ತಾಪವನ್ನು ತಡೆಯುವುದಕ್ಕಾಗಿ ವಾಸುಕಿಯು ಅದನ್ನು ಬಳಸುತ್ತಿದ್ದನು. ಹೀಗಿರಲು ಆ ಮುಕ್ತಾವಲಿಯನ್ನು ನಾಗಾರ್ಜುನನೆಂಬ ಭಿಕ್ಷುವು ವಾಸುಕಿಯಿಂದ ಬೇಡಿ ಪಡೆದು, ಅದನ್ನು ತನ್ನ ಸ್ನೇಹಿತನಾದ ಸಾತವಾಹನನನಿಗೆ ಕೊಟ್ಟನು. ಅದೇ ಮುಕ್ತಾವಲಿಯು ಗುರುಶಿಷ್ಯಪರಂಪರೆಯಾಗಿ ನಮಗೆ ಬಂದುದು. ನಿನ್ನಂತಹವರಿಗೆ ಏನನ್ನಾದರೂ ನೀಡುವುದು ಧೃಷ್ಟತನವೆನಿಸಿದರೂ, ಇದಕ್ಕೆ ಸಮಸ್ತ ವಿಷಹರಶಕ್ತಿಯಿರುವುದರಿಂದ, ಇದನ್ನು ಸ್ವೀಕರಿಸು. ನೀನು ಸಕಲ ಜೀವಿಗಳನ್ನು ಕಾಯತಕ್ಕವನು; ಇದು ನಿನ್ನ ಜೀವವನ್ನು ಕಾಯುವುದು" ಎಂದು ಝಗಝಗನೆ ತೊಳಗುತ್ತಿದ್ದ ಮುಕ್ತಾವಲಿಯನ್ನು ದೊರೆಯ ಭುಜಕ್ಕೆ ಬಿಗಿದನು. ಹರ್ಷನು ಅದನ್ನು ಕೃತಜ್ಞತೆಯಿಂದ ಸ್ವೀಕರಿಸಿದನು.

ಇದಾದನಂತರ, ರಾಜ್ಯಶ್ರೀಯ ತಾಂಬೂಲವಾಹಿನಿಯಾದ ಪತ್ರಲತೆಯು ಹರ್ಷನನ್ನು ಸಾರಿ, "ದೇವ! ರಾಣಿಯು ಒಂದು ದಿನ ಕೂಡ ನಿನ್ನೆದುರಿಗೆ ಗಟ್ಟಿಯಾಗಿ ಮಾತನಾಡಿದವಳಲ್ಲ. ಆದರೆ ಈಗ ಬಂದೆರಗಿದ ಅನರ್ಥಪರಂಪರೆಯು ಅವಳ ಮೌನವನ್ನು ಮುರಿದು ನುಡಿಯಿಸುವುದು. ಪತಿ ಪುತ್ರರೇ ಹೆಂಗಸಿಗೆ ಆಧಾರ. ಎರಡೂ ಇಲ್ಲದವರು ಬದುಕುವುದು ನಾಚಿಕೆಗೇಡು. ಅವಳು ಜೀವ ನೀಗಬೇಕೆಂದು ಮಾಡಿಕೊಂಡಿದ್ದ ಸಂಕಲ್ಪವನ್ನು ನೀವು ನಿಲ್ಲಿಸಿದಿರಿ. ಆದರಿಂದ ಕಾಷಾಯವಸ್ತ್ರಗಳನ್ನು ಧರಿಸುವುದಕ್ಕಾದರೂ ಅವಳಿಗೆ ಅಪ್ಪಣೆಕೊಡಬೇಕು" ಎಂದು ಒಡತಿಯ ಪ್ರಾರ್ಥನೆಯನ್ನು ಅರಿಕೆಮಾಡಿದಳು. ಹರ್ಷನು, ಏನು ಉತ್ತರ ಹೇಳಬೇಕೆಂಬುದು ತೋಚದೆ ಸುಮ್ಮನೆ ಕುಳಿತಿದ್ದನು.

ರಾಜ್ಯಶ್ರೀಯ ಪ್ರಾರ್ಥನೆಯನ್ನು ಕೇಳಿ, ಹರ್ಷನ ಮೌನವನ್ನು ನೋಡಿ, ದಿವಾಕರಮಿತ್ರನು "ವತ್ಸೆ! ದುಃಖವೆಂಬುದು ಆರದ ಬೆಂಕಿ, ಸಾವಿನ ಸೇನೆ. ಅದನ್ನು ತಡೆಯುವುದು ತಿಳಿದವರಿಗೆ ಕೂಡ ಕಷ್ಟ; ಅದರಲ್ಲಿಯೂ ಕೋಮಲೆಯರಾದ ನಿಮಗೆ ಇನ್ನೂ ಕಷ್ಟ. ಆದರೆ, ಆಯುಷ್ಮತಿ, ಹೀಗೆ ದುಃಖಿಸಿ ಏನು ಫಲ? ವಿಧಿಯನ್ನು ಯಾರು ಬದಲಾಯಿಸಬಲ್ಲರು? ಈ ಜನನ ವಾರ್ಧಿಕ್ಯ ಮರಣಗಳು ಒಂದಾದ ಮೇಲೊಂದು ಇದ್ದೇ ಇರುತ್ತವೆ. ಯಮದೂತರು ವಿರಾಮವಿಲ್ಲದೆ ನಡೆಸುವ ಬೇಟೆಗೆ ಮೊದಲಿಲ್ಲ, ಕೊನೆಯಿಲ್ಲ. ಈ ಲೋಕದಲ್ಲಿ ಯಾವುದೂ ಚಿರವಾಗಿ ನಿಲ್ಲತಕ್ಕುದಲ್ಲ; ಎಲ್ಲವೂ ನಾಶವಾಗತಕ್ಕುದೇ! ಇದು ನಿನಗೆ ನೆನಪಿರಲಿ; ದುಃಖದ ಕತ್ತಲೆ ನಿನ್ನ ಮನಸ್ಸನ್ನು ಆವರಿಸದಿರಲಿ. ಕ್ಷಣಮಾತ್ರ ಯೋಚಿಸಿ ನೋಡಿದರೆ, ಧೃತಿ ದೃಢವಾಗುವುದು. ದುಃಖವು ನಿನ್ನನ್ನು ಕೊರೆಯುತ್ತಿದ್ದರು ಕೂಡ, ನಿನಗೆ ಗುರುವಿನಂತೆ, ತಂದೆಯಂತೆ ಇರುವ ನಿನ್ನ ಅಣ್ಣನನ್ನು ನೀನು ಗಮನಿಸಬೇಡವೆ? ಸಂನ್ಯಾಸಿನಿಯಾದರೆ ನಿನ್ನ ದುಃಖವೇನೋ ಶಮನವಾಗುವುದು, ಸರಿ. ಆದರೆ ನಿನ್ನ ಅಣ್ಣನ ಮಾತಿನಂತೆ ನೀನು ನಡೆಯಬೇಕು. ಅವನನ್ನು ನೀನು ಅಣ್ಣನೆನ್ನು, ಹಿರಿಯನೆನ್ನು, ವತ್ಸಲನೆನ್ನು, ಗುಣವಂತನೆನ್ನು, ರಾಜನೆನ್ನು—

ಏನೆಂದರೂ ಅವನ ಇಷ್ಟಕ್ಕೆ ವಿರೋಧವಾಗಿ ನೀನು ವರ್ತಿಸಲಾಗದು” ಎಂದನು.

ಆ ಮಾತನ್ನು ಹರ್ಷನು ತಾನೂ ಅನುಮೋದಿಸಿ “ಆರ್ಯ, ನಿಮ್ಮಂತೆ ನುಡಿಯಲು ಯಾರಿಗೆ ಸಾಧ್ಯ? ನಿಮ್ಮಂತಹವರ ಬೋಧೆಯಿಂದ ಜಗದ ದುಃಖದ ಭಾರ ಕಡಿಮೆಯಾಗುವುದರಲ್ಲಿ ಏನೂ ಸಂದೇಹವಿಲ್ಲ. ನನ್ನೊಡನೆ ಈ ಅರಣ್ಯದಲ್ಲಿ ನಡೆದುಬಂದು ಈಗಾಗಲೇ ಬಹಳ ಉಪಕರಿಸಿರುವಿರಿ. ಈಗ ನನ್ನ ಮತ್ತೊಂದು ಪ್ರಾರ್ಥನೆಯನ್ನು ಲಾಲಿಸಬೇಕು. ಈ ನನ್ನ ತಂಗಿ ಇನ್ನೂ ಚಿಕ್ಕವಳು, ಪಾಡುಪಟ್ಟು ಬಹಳ ನೊಂದಿರುವಳು. ನನ್ನ ರಾಜಕಾರ್ಯಗಳನ್ನು ನಿಲ್ಲಿಸಿಯಾದರೂ ಅವಳ ಆರೈಕೆಮಾಡಬಯಸುವೆನು. ಆದರೆ ನನ್ನ ಅಣ್ಣನ ವಧೆಯಾದಾಗ, ಅವನ ವಧೆಗೆ ಕಾರಣರಾದ ಕ್ಷತ್ರಿಯರನ್ನು ಕೊಲ್ಲುವೆನೆಂದು ಪ್ರತಿಜ್ಞೆ ಮಾಡಿದೆನು; ಆದ ಅವಮಾನವನ್ನು ಸಹಿಸಲಾರದೆ ಆತ್ಮವನ್ನು ಕೋಪಕ್ಕೆ ಅರ್ಪಿಸಿದೆನು. ಅದರಿಂದ ಆರ್ಯನು ನನ್ನ ಒಂದು ಕಾರ್ಯದಲ್ಲಿ ನೆರವಾಗಲು ಸಮ್ಮತಿಸಬೇಕು. ಇಂದಿನಿಂದ, ನಾನು ನನ್ನ ಪ್ರತಿಜ್ಞೆಯನ್ನು ಪೂರೈಸುವಾಗ ಈಕೆ ನನ್ನ ಜೊತೆಯಲ್ಲಿರಲಿ; ತಮ್ಮ ಧರ್ಮಕಥೆಗಳಿಂದ ಇವಳಿಗೆ ಸಮಾಧಾನವಾಗಲಿ; ತಮ್ಮ ಬೋಧೆಯಿಂದ ಇವಳು ಜ್ಞಾನ ಪಡೆಯಲಿ; ತಮ್ಮ ಹಿತವಾದದಿಂದ ಇವಳು ಶಾಂತಳಾಗಲಿ. ಅನಂತರ ನನ್ನ ಪ್ರತಿಜ್ಞೆ ನೆರವೇರಿದ ಮೇಲೆ, ನಾನೂ ಅವಳೂ ಒಟ್ಟಿಗೆ ಕಾಷಾಯವನ್ನು ಧರಿಸುವೆವು ಈ ಪ್ರಾರ್ಥನೆಯನ್ನು ತಾವು ನಡೆಸಿಕೊಡಬೇಕು. ದಧೀಚಿಯು ದೇವೇಂದ್ರನಿಗೆ ತನ್ನ ಮೈಮೂಳೆ ಕೊಟ್ಟುದು, ಮುನಿವರ್ಯನಾದ ಬುದ್ಧನು ಹುಲಿಗೆ ತನ್ನ ಶರೀರವನ್ನು ಅರ್ಪಿಸಿದುದು, ಇದೇ ಮೊದಲಾದ ಪರೋಪಕಾರದ ಕತೆಗಳು ತಮಗೆ ತಿಳಿಯದುದೆ?” ಎಂದು ಪ್ರಾರ್ಥಿಸಿ ಸುಮ್ಮನಾದನು.

ದಿವಾಕರಮಿತ್ರನು ಹರ್ಷನ ಪ್ರಾರ್ಥನೆಯನ್ನು ನಡೆಸಿಕೊಡಲು ಒಪ್ಪಿ “ನಿನ್ನಂತಹ ಭದ್ರರು ಯಾವುದನ್ನೂ ಎರಡು ಬಾರಿ ಹೇಳಬೇಕಾಗಿಲ್ಲ. ನೀನು ಮನಸ್ಸಿನಲ್ಲಿ ಏನಾದರೂ ಯೋಚಿಸುವುದು ತಡ; ಅದು ದೊಡ್ಡದಾಗಲಿ ಚಿಕ್ಕದಾಗಲಿ, ನಿನ್ನ ಗುಣಗಳಿಗೆ ಮಾರುವೋಗಿ ಸರ್ವರೂ

ನಿನ್ನ ಸೇವೆಗೆ ಸಿದ್ಧರಾಗುವರು" ಎಂದನು. ಅವನ ಒಪ್ಪಿಗೆಯಿಂದ ಹರ್ಷನಿಗೆ ಹರ್ಷವಾಯಿತು. ಆ ರಾತ್ರೆ ಅಲ್ಲಿಯೇ ತಂಗಿದ್ದು, ಮಾರನೆಯ ದಿನ ನಿರ್ಘಾತನನ್ನು ಅನೇಕ ಆಭರಣಾದ್ಯಲಂಕಾರಗಳಿಂದ ಆದರಿಸಿ ಕಳುಹಿಸಿಕೊಟ್ಟನು. ಅನಂತರ ರಾಜ್ಯಶ್ರೀಯನ್ನೂ ದಿವಾಕರಮಿತ್ರನನ್ನೂ ಕರೆದುಕೊಂಡು ಹೊರಟು, ಹರ್ಷನು, ತಾನು ಗಂಗಾತೀರದಲ್ಲಿ ಬಿಟ್ಟುಬಂದ ಪಾಳಯಕ್ಕೆ ಬಂದು ಸೇರಿದನು.

## ಹರ್ಷನ ಚರಿತ್ರೆಗೆ ಸಾಧನಗಳು

ರಾಜ್ಯಶ್ರೀಯನ್ನು ಪಡೆದ ಮೇಲೆ ಹರ್ಷನು ತನ್ನ ಪ್ರತಿಜ್ಞೆಯನ್ನು ಪೂರೈಸಲು ನಡೆದನಷ್ಟೆ. ರಾಜ್ಯಸಂಪಾದನೆಗಾಗಿ ಆಗಾಗ್ಗೆ ನಡೆಯುತ್ತಿದ್ದ ಯುದ್ಧಗಳನ್ನು ಆತನು ಚಿಕ್ಕಂದಿನಿಂದಲೂ ನೋಡುತ್ತಿದ್ದನು. ಈ ರೀತಿ ಮೂರುಮೂರು ದಿವಸಕ್ಕೂ ನಡೆಯುವ ಮಾರಣ ಕಾರಣವಾದ ಕದನಗಳನ್ನು ಕಡೆಗಾಣಿಸಬೇಕಾದರೆ, ಸಣ್ಣ ದೊಡ್ಡ ರಾಜ್ಯಗಳೆಲ್ಲವನ್ನೂ ಒಂದೆ ಕೊಡೆಯ ನೆರಳಿಗೆ ತಂದು ಆಳಬಲ್ಲ ಚಕ್ರವರ್ತಿಯೊಬ್ಬನು ಬೇಕೆಂದು ಹರ್ಷನಿಗೆನಿಸಿತ್ತು. ಮಾಳವೇಶ್ವರನು ಪ್ರಭಾಕರವರ್ಧನನ ಅಳಿಯನನ್ನು ಕೊಂದುದು, ಗೌಡದೇಶಾಧಿಪನು ರಾಜ್ಯವರ್ಧನನನ್ನು ಮೋಸದಿಂದ ವಧಿಸಿದುದು—ಈ ತೆರನಾಗಿ ಪುಷ್ಪಭೂತಿ ವಂಶಕ್ಕೆ ತಗಲಿದ ಅವಮಾನ ಬೇರೆ ಅವನನ್ನು ಚುಚ್ಚುತ್ತಿತ್ತು. ಆ ಘೋರಾಪಮಾನವನ್ನು ಶತ್ರುಗಳ ರಕ್ತದಿಂದ ತೊಳೆಯಬೇಕೆಂದು ಮೇಲೆದ್ದ ಹರ್ಷನಿಗೆ ಸಿಂಹನಾದನೂ ಸ್ಕಂದಗುಪ್ತನೂ ದಿಗ್ವಿಜಯಕ್ಕಾಗಿ ಹುರಿದುಂಬಿಸಿದ್ದರು, ಅವನ ಸಾಮಂತರಾಜರು ಕೂಡ ಅದೇ ದಿಗ್ವಿಜಯಕ್ಕೆ ಅರಸನಿಗಿಂತ ಹೆಚ್ಚು ಆತುರರಾಗಿದ್ದರು. ಈ ಎಲ್ಲ ಕಾರಣಗಳಿಗಿಂತ ಮೇಲಾಗಿ, ಚಕ್ರವರ್ತಿತ್ವದ ಮಹತ್ವಾಕಾಂಕ್ಷೆಯು ಹರ್ಷನ ಕ್ಷತ್ರಿಯರಕ್ತದಲ್ಲಿ ಸಹಜವಾಗಿ ಬೆರೆತುಕೊಂಡಿತ್ತು. ಅದಕ್ಕಾಗಿ ಹರ್ಷನು ಐದು ಸಾವಿರ ಆನೆ, ಇಪ್ಪತ್ತು ಸಾವಿರ ಕುದುರೆ, ಐವತ್ತು ಸಾವಿರ ಕಾಲಾಳುಗಳ ಸೇನೆಯೊಡನೆ ತನ್ನ ದಿಗ್ವಿಜಯಕ್ಕೆ ಹೊರಟನು.

ಆತನ ದಿಗ್ವಿಜಯದ ವಿವರಗಳೆಲ್ಲವೂ ಸ್ಪಷ್ಟವಾಗಿ ತಿಳಿದುಬಂದಿಲ್ಲ. ಆ ದಿಗ್ವಿಜಯವನ್ನು ಪ್ರೇರಿಸಿದುದು ಗೌಡದೇಶಾಧಿಪನಾದ ಶಶಾಂಕನ

ಮೇಲಿನ ಕೋಪವಷ್ಟೆ. ಆ ಶಶಾಂಕನೊಡನೆ ಹರ್ಷನು ಹೇಗೆ ಹೋರಾಡಿದನು, ಅದರ ಪರಿಣಾಮವೇನಾಯಿತು ಎಂಬುದು ಕೂಡ ತಿಳಿದುಬರುವಂತಿಲ್ಲ!

ಇದಕ್ಕೆ ಕಾರಣವಿಷ್ಟೆ: ಹರ್ಷನ ಚರಿತ್ರೆಯನ್ನು, ಎಂದರೆ ಹರ್ಷನು ಹುಟ್ಟಿದಂದಿನಿಂದ ಅವನು ಸಾಯುವವರೆಗೆ ಯಾವಯಾವ ಸಮಯದಲ್ಲಿ ಏನೇನು ಕಾರ್ಯಗಳನ್ನು ಹೇಗೆ ಹೇಗೆ ಮಾಡಿದನು ಎಂಬುದನ್ನು, ಸಕಾರಣವಾಗಿ ಎಲ್ಲ ವಿವರಗಳೊಡನೆ ಹಿಂದೆ ಯಾರೂ ಬರೆದಿಡಲಿಲ್ಲ. ಹರ್ಷನ ಆಸ್ಥಾನಕವಿಯಾದ 'ಬಾಣ' ನೆಂಬವನು 'ಹರ್ಷಚರಿತ'ವೆಂಬ ಕಾವ್ಯವನ್ನು ಬರೆದನು. ಈ ಪುಸ್ತಕದಲ್ಲಿ, ಮೊದಲು ಪುಷ್ಪಭೂತಿಯ ಕತೆಯಿಂದ ರಾಜ್ಯಶ್ರೀ ವೃತ್ತಾಂತ ಪೂರ್ತಿಯಾಗಿ ಬರೆದಿರುವ ಸಂಗತಿಗಳೆಲ್ಲವೂ ಆ 'ಹರ್ಷಚರಿತ'ದಿಂದಲೇ ತೆಗೆದುಕೊಂಡವು. ಆದರೆ ಬಾಣನ 'ಹರ್ಷಚರಿತ'ವು ರಾಜ್ಯಶ್ರೀ ವೃತ್ತಾಂತದಲ್ಲಿಯೆ ಕೊನೆಯಾಗಿ ಅಪೂರ್ಣವಾಗಿದೆ. ರಾಜ್ಯಶ್ರೀಯು ಲಭಿಸಿದನಂತರ ಹರ್ಷನು ಏನು ಮಾಡಿದನೆಂಬುದು ಬಾಣನಿಂದ ತಿಳಿದುಬರುವಂತಿಲ್ಲ.

ಅದರ ಮುಂದಿನ ವಿಷಯಗಳು ನಮಗೆ 'ಹುಯೆನ್‌ತ್ಸಾಂಗ್'ಎಂಬವನಿಂದ ತಿಳಿದು ಬರುವುವು. ಈ ಹುಯೆನ್‌ತ್ಸಾಂಗನು ಚೀನಾದೇಶದ ಒಬ್ಬ ಬೌದ್ಧ ಸಂನ್ಯಾಸಿ. ಬೌದ್ಧಧರ್ಮವು ಹುಟ್ಟಿ ಬೆಳೆದ, ಆ ಧರ್ಮದ ತೊಟ್ಟಿಲು ತವರೂರಾದ, ಹಿಂದೂದೇಶದಲ್ಲಿಯೇ ಆ ಧರ್ಮವನ್ನು ಆಮೂಲಾಗ್ರವಾಗಿ ತಿಳಿದುಕೊಂಡು ಹೋಗಬೇಕೆಂದು ಅವನು ಇಲ್ಲಿಗೆ ಬಂದಿದ್ದನು. ಹೀಗೆ ಬಂದು, ಧರ್ಮವನ್ನು ಕಲಿಯುತ್ತ ಹಿಂದೂ ದೇಶದ ಉದ್ದಗಲಗಳನ್ನು ಸುತ್ತುವಾಗ, ಹುಯೆನ್‌ತ್ಸಾಂಗನು ಹರ್ಷನ ಸಾಮ್ರಾಜ್ಯಕ್ಕೂ ಬಂದಿದ್ದನು. ಅವನು ಬರುವ ವೇಳೆಗೆ ಹರ್ಷನ ದಿಗ್ವಿಜಯ ಮುಗಿದು ಶಾಂತಿ ನೆಲಸಿತ್ತು. ಹರ್ಷನ ರಾಜ್ಯವಲ್ಲದೆ ಮಿಕ್ಕ ರಾಜ್ಯಗಳನ್ನೂ ಹುಯೆನ್‌ತ್ಸಾಂಗನು ತಕ್ಕಷ್ಟು ಮಟ್ಟಿಗೆ ನೋಡಿದನು. ಆತನು ಹಿಂದೂದೇಶಕ್ಕೆ ಬಂದುದು ಮುಖ್ಯವಾಗಿ ಧರ್ಮವನ್ನು ಕಲಿಯುವುದಕ್ಕೆ ಆದರು ಕೂಡ, ತಾನು ನೋಡಿಬಂದ ಸ್ಥಳದೇಶಗಳ ಆಚಾರ ವ್ಯವಹಾರ ಇತಿಹಾಸ ಚರಿತ್ರೆಗಳನ್ನೂ ತಿಳಿದುಕೊಂಡನು. ವರ್ಷಗಟ್ಟಲೆಯಾಗಿ

ಹಿಂದೂದೇಶದಲ್ಲಿ ಪಾಸಮಾಡಿ, ಕಡೆಗೆ ಅವನು ತನ್ನ ಚೀನಾದೇಶಕ್ಕೆ ಹಿಂದಿರುಗಿದನು. ಹಿಂದಿರುಗಿದ ಮೇಲೆ, ತಾನು ಬಿಟ್ಟು ಬಂದ ಹಿಂದೂ ದೇಶವನ್ನೂ, ಚೀನದಿಂದ ಹಿಂದೂಸ್ಥಾನಕ್ಕೆ ಬರುವಾಗ ನಡುವೆ ಸಿಕ್ಕಿದ ನಾಡುಗಳನ್ನೂ ಕುರಿತು ಒಂದು ದೊಡ್ಡ ಪುಸ್ತಕ ಬರೆದನು ; ಅದಕ್ಕೆ 'ಸಿ-ಯು-ಕಿ' ಎಂದು ಹೆಸರು. ಅದರಲ್ಲಿ, ತಾನು ಆಯಾ ದೇಶಗಳ ವಿಚಾರವಾಗಿ ತಿಳಿದ ಜ್ಞಾನವೆಲ್ಲವನ್ನೂ ಬರೆದಿಟ್ಟನು. ಆ ಗ್ರಂಥವು ನಮಗೆ ಹರ್ಷನ ಚರಿತ್ರೆಯನ್ನು ತಿಳಿಸದಿದ್ದರೂ, ಆತನಿಗೆ ಸಂಬಂಧಿಸಿದ ಕೆಲವು ಮುಖ್ಯ ವಿಷಯಗಳನ್ನಾದರೂ ತಿಳಿಸುತ್ತದೆ.

ಮೇಲೆ ಹೇಳಿದ ಹುಯೆನ್‌ತ್ಸಾಂಗನಿಗೆ 'ಹುಯಿ-ಲಿ' ಎಂಬ ಶಿಷ್ಯನಿದ್ದನು. ಹುಯೆನ್‌ತ್ಸಾಂಗನು ಹಿಂದೂದೇಶದಿಂದ ಹಿಂದಿರುಗಿದ ಮೇಲೆ ಆ ಶಿಷ್ಯನು ತನ್ನ ಗುರುವಿನ ಜೀವನಚರಿತ್ರೆಯನ್ನು ಬರೆದಿಟ್ಟನು ಹುಯೆನ್‌ತ್ಸಾಂಗನು ಹಿಂದೂದೇಶದಲ್ಲಿ ಹರ್ಷನ ಆಸ್ಥಾನದಲ್ಲಿಯೂ ಕೆಲ ಕಾಲ ನಿಂತಿದ್ದನಾದುದರಿಂದ, ಆ ಗ್ರಂಥದಿಂದಲೂ ಹರ್ಷನ ವಿಷಯ ಸ್ವಲ್ಪ ಸ್ವಲ್ಪ ತಿಳಿದುಬರುತ್ತದೆ.

ಇದಲ್ಲದೆ ಕೆಲಕೆಲವು ಶಾಸನಗಳಿಂದಲೂ ಹರ್ಷನ ವಿಷಯ ತಿಳಿದು ಬರುತ್ತದೆ. ಈ ಎಲ್ಲ ಸಾಧನಗಳ ಸಹಾಯದಿಂದ, ಹರ್ಷನು ರಾಜ್ಯಶ್ರೀಯನ್ನು ಪಡೆದ ಮುಂದೆ ಏನು ಮಾಡಿದನೆಂದು ನೋಡೋಣ.

## ಹರ್ಷನ ದಿಗ್ವಿಜಯ

ಹರ್ಷನ ದಿಗ್ವಿಜಯದ ವಿಸ್ತಾರವು ಸಂಪೂರ್ಣವಾಗಿ ತಿಳಿದುಬಂದಿಲ್ಲವೆಂದು ಮೇಲೆ ಹೇಳಿದುದನ್ನು ಪುನಃ ಹೇಳಬೇಕಾಗಿದೆ. ಏಕೆಂದರೆ, ಕೈಕೊಂಡ ದಿಗ್ವಿಜಯ ಸಫಲವಾಗುವ ವೇಳೆಗೆ ಹರ್ಷನು "ಸಕಲೋತ್ತರಾಪಥೇಶ್ವರ" ಎಂದು ಬಿರುದು ಪಡೆದನು. ಎಂದರೆ ಹಿಂದೂದೇಶದ ಉತ್ತರಭಾಗವಷ್ಟೂ ಹರ್ಷನ ಕೈಕೆಳಗಾಗಿತ್ತು. ಆದರೆ ಅದಷ್ಟೂ ಅವನ ಕೈಕೆಳಗಾಗಲು ಯಾವ ಯಾವ ಭಾಗವನ್ನು ಹೇಗೆ ಹೇಗೆ ಗೆಲಿದನೆಂಬುದು ತಿಳಿಯುವ ಹಾಗಿಲ್ಲ. ಆದರಿಂದ ಗೆಲುವನ್ನು ಕುರಿತು ತಿಳಿದಿರುವಷ್ಟನ್ನು ಹೇಳಿದರೆ, ಈ ಇಷ್ಟರಿಂದಲೇ ಅವನು ಸಕಲೋತ್ತರಾಪಥೇಶ್ವರನಾದುದು ಹೇಗೆ ಎಂದು ಶಂಕಿಸಬಾರದು.

ಹುಯೆನ್‌ತ್ಸಾಂಗನು ಹೇಳುವಂತೆ, ಹರ್ಷನು ಮೊದಲು ಪೂರ್ವದ ಕಡೆ ನಡೆದನು; ನಡೆದು, ಪಂಚಹಿಂದು ಎಂದು ಹೆಸರಾದ ಸ್ವರಾಷ್ಟ್ರ (ಪಂಜಾಬು), ಕನ್ಯಾಕುಬ್ಜ, ಗೌಡ (ಬಂಗಾಳ), ಮಿಥಿಲಾ (ದರ್ಭಾಂಗ) ಮತ್ತು ಉಡ್ರ (ಒರಿಸ್ಸ)ಗಳನ್ನು ಜಯಿಸಿದನು. ಮೊದಮೊದಲು ಆ ರಾಜ್ಯಗಳು ಹರ್ಷನ ಈಶ್ವರತ್ವವನ್ನು ಒಪ್ಪಲಿಲ್ಲ. ಆದರೆ ಹರ್ಷನು ಆರು ವರ್ಷ ಒಂದೇ ಸಮನಾಗಿ ಕಾದಾಡಿ ಅದನ್ನು ವಶಪಡಿಸಿಕೊಂಡನು. ಸಿಂಧು ದೇಶದ ದೊರೆಯನ್ನು ಹರ್ಷನು ಮರ್ದಿಸಿದನೆಂದು ಬಾಣನು ಹೇಳಿರುವನು. ಪ್ರಾಗ್ಜ್ಯೋತಿಷಪುರವೆನಿಸಿದ ಅಸ್ಸಾಮಿನ ದೊರೆಯಂತೂ ಮೊದಲೇ ಹರ್ಷನಿಗೆ ಮೈತ್ರಿಯಿಂದ ಶರಣನಾದನು. ಹಿಮಾಲಯದ ಬಳಿಯ ದುರ್ಗಮ ಪ್ರಾಂತ್ಯವೊಂದು ಹರ್ಷನಿಗೆ ಕಪ್ಪ ಕೊಟ್ಟಿತು. ಆ ಪ್ರಾಂತ್ಯವು ನೇಪಾಳವಿರಬಹುದೆಂದು ಕೆಲವು ಪಂಡಿತರ ಮತ; ನೇಪಾಳ ವಲ್ಲವೆಂದು ಕೆಲವರ ಮತ.

ಪಶ್ಚಿಮದಲ್ಲಿನ ವಲ್ಲಭೀರಾಜ್ಯವನ್ನೂ ಹರ್ಷನು ವಶಪಡಿಸಿಕೊಂಡನು. ವಲ್ಲಭಿಯ ಅರಸನು ಹರ್ಷನಿಗೆ ಸೋತುಹೋಗಿ, ಎರಡನೆಯ ದದ್ದನೆಂಬ ಗೂರ್ಜರ ರಾಜನ ಮರೆಹೊಕ್ಕನು. ಆದರೆ ಪುನಃ ಹರ್ಷನನ್ನೇ ಮರೆ ಹೊಕ್ಕು, ಅವನ ಮಗಳನ್ನು ಮದುವೆಯಾಗಿ ಅವನ ಆಧಿರಾಜ್ಯವನ್ನು ಒಪ್ಪಿಕೊಂಡನು. ವಲ್ಲಭೀ ರಾಜ್ಯದ ಮೇಲೆ ದಂಡೆತ್ತಿಹೋಗಿದ್ದಾಗಲೇ ಆನಂದಪುರ, ಕಚ್, ಸೂರತ್ ಮುಂತಾದ ಪಶ್ಚಿಮ ಪ್ರಾಂತ್ಯಗಳೂ ಅವನ ಅಧೀನವಾದುವು.

## “ದಕ್ಷಿಣಾಪಥ ಪೃಥಿವ್ಯಾಃ ಸ್ವಾಮಿ”

ಹೀಗೆ ಉತ್ತರ ಹಿಂದೂಸ್ಥಾನಕ್ಕೆ ಸಾರ್ವಭೌಮನಾಗಿ ‘ಸಕಲೋತ್ತರಾಪಥೇಶ್ವರ’ ನೆನಿಸಿದ ಹರ್ಷನಿಗೆ ದಕ್ಷಿಣ ಹಿಂದೂಸ್ಥಾನದ ಮೇಲೆ ದಂಡೆತ್ತುವ ಯೋಚನೆ ಬಂತು.

ಆ ಕಾಲದಲ್ಲಿ ದಕ್ಷಿಣ ಹಿಂದೂಸ್ಥಾನಕ್ಕೆ ಚಕ್ರೇಶ್ವರನಾಗಿ “ದಕ್ಷಿಣಾಪಥ ಪೃಥಿವ್ಯಾಃ ಸ್ವಾಮಿ” ಎಂದು ಕರೆಯಿಸಿಕೊಳ್ಳುತ್ತಿದ್ದವನು ಇಮ್ಮಡಿ ಪುಲಕೇಶಿ. ಹರ್ಷನು ಪಶ್ಚಿಮದ ಕಡೆ ದಂಡೆತ್ತಿ ವಲ್ಲಭೀರಾಜ್ಯವನ್ನು

ಮುಟ್ಟುವಾಗ ಪುಲಕೇಶಿಯ ಆಡಳಿತಕ್ಕೆ ಒಳಗಾದ ಕೆಲವು ಪ್ರಾಂತಗಳನ್ನೂ ಮುಟ್ಟಬೇಕಾಗಿ ಬಂದಿತ್ತು. ಹಾಗೆಂದೇ ಮುಂದೆ ಹೋಗಿ ಪುಲಕೇಶಿಯೊಡನೆ ಸೆಣಸಬೇಕೆಂದು ಬಯಸಿದನು. ಉತ್ತರದಲ್ಲಿ ಒಂದಾದ ಮೇಲೊಂದು ರಾಜ್ಯವನ್ನು ಜಯಿಸಿ, ಜಯವೆಲ್ಲೆಲ್ಲಿಯೂ ತನಗೆ ಸ್ವತಸ್ಸಿದ್ಧವೆಂದು ಹರ್ಷನು ಎಣಿಸಿದನು; ತನ್ನ ಸೇನಾಪತಿಗಳು ಅಮೋಘವಾದವರೆಂದು ತಿಳಿದನು. ಆ ಘೋರಣೆಯಲ್ಲಿ ಪಂಚಹಿಂದೂದೇಶಗಳಿಂದ ಸೇನೆಯನ್ನು ಸೇರಿಸಿಕೊಂಡು, ಅತ್ಯುತ್ತಮರಾದ ಸೇನಾಪತಿಗಳೊಡನೆ ದಕ್ಷಿಣದ ಮೇಲೆ ದಂಡೆತ್ತಿದನು.

ಪುಲಕೇಶಿಯಾಗಲಿ ಅವನ ಪ್ರಜೆಗಳಾಗಲಿ ಹರ್ಷನು ಎಣಿಸಿದ್ದಷ್ಟು ಸಾಮಾನ್ಯರಾಗಿರಲಿಲ್ಲ. ಇಮ್ಮಡಿ ಪುಲಕೇಶಿಯು, ಹರ್ಷನು ಉತ್ತರದಲ್ಲಿ ರಾಜ್ಯ ಬೆಳೆಸಿದಂತೆ, ತಾನು ದಕ್ಷಿಣದಲ್ಲಿ ರಾಜ್ಯ ಬೆಳೆಸಿದವನು. ಮಾಳವ, ದಕ್ಷಿಣ ಕೋಸಲ, ಕಳಿಂಗ, ಚೋಳ, ಪಾಂಡ್ಯ, ಕೇರಳಗಳನ್ನು ತನ್ನ ಬಾಹುಬಲದಿಂದ ಗೆಲಿದಿದ್ದನು. ಆತನನ್ನು ಚಾಲುಕ್ಯ ಚಕ್ರೇಶ್ವರನೆಂದು ಕರೆಯುತ್ತಿದ್ದರು. ನಮ್ಮ ಕರ್ಣಾಟಕ ದೇಶದಲ್ಲಿರುವ ಬಿಜಾಪುರದ ಬಳಿಯ ಬಾದಾಮಿಯು ಅವನ ರಾಜಧಾನಿಯಾಗಿತ್ತು. ಹುಯೆನ್‌ತ್ಸಾಂಗನು ಅವನ ಪ್ರಜೆಗಳನ್ನು ಹೀಗೆ ವರ್ಣಿಸಿರುವನು: 'ಪುಲಕೇಶಿಯ ಪ್ರಜೆಗಳು ಅಭಿಮಾನಧನರು, ವೀರರು. ಇತರರು ಮಾಡಿದ ಉಪಕಾರವನ್ನು ಎಂದೂ ಮರೆಯರು; ಮಾಡಿದ ಅಪಕಾರವನ್ನೂ ಮರೆಯರು. ತಮಗೆ ಸಹಾಯಮಾಡಿದವರಿಗಾಗಿ ಜೀವವನ್ನೂ ಕೊಡುವರು; ದ್ರೋಹಮಾಡಿದವರೊಡನೆ ಜೀವವಿರುವವರೆಗೂ ಕಾದಾಡುವರು. ಯುದ್ಧಕ್ಕೆ ಹೊರಟ ಅವರ ವೀರಯೋಧರು ಕಾಳೆಗಕ್ಕೆ ಮುಂಚೆ ತಾವು ಮದ್ಯ ಕುಡಿದು ತಮ್ಮ ಆನೆಗಳಿಗೂ ಕುಡಿಸುವರು. ತನ್ನ ವೀರಯೋಧರ ಮತ್ತು ಗಜಸೇನೆಯ ಶಕ್ತಿಯಲ್ಲಿ ಸಂಪೂರ್ಣ ನಂಬಿಕೆಯಿಟ್ಟು, ದೊರೆಯು ಪರರಾಜರನ್ನು ಧೈರ್ಯವಾಗಿ ತಿರಸ್ಕರಿಸುವನು.' ಇಂತಹ ದೊರೆಯ ಪ್ರಭಾವ, ಬರಿಯ ದಕ್ಷಿಣ ಹಿಂದೂಸ್ಥಾನ ಮಾತ್ರವಲ್ಲ, ಪರ್ಸಿಯಾ ದೇಶದ ವರೆಗೂ ಹರಡಿತ್ತು. ಪರ್ಸಿಯಾದೇಶದ ದೊರೆಗೂ ಪುಲಕೇಶಿಗೂ ಪತ್ರವ್ಯವಹಾರವಿತ್ತು.

ಕಾಳೆಗಕ್ಕೆ ಕರೆದು ಬಂದ ಹರ್ಷನೆದುರು ಪುಲಕೇಶಿಯು ಹಿಮ್ಮೆಟ್ಟ ಲಿಲ್ಲ. ಆತನ ವಿಶಾಲವಾದ ಸೇನೆಯು ವಿಂಧ್ಯದ ಬಳಿ ರೇವಾನದೀತೀರ ದಲ್ಲಿ ಹರ್ಷನ ಸೇನೆಗೆ ಕಾಳಗಕೊಟ್ಟಿತು. ಪುಲಕೇಶಿಯ ಪ್ರಸಿದ್ಧವಾದ ಗಜಸೈನ್ಯದ ಮುಂದೆ ಹರ್ಷನ ಸೇನೆ ನಿಲ್ಲಲಾರದೆ ಹೋಯಿತು. ಸೋಲೆಂಬುದನ್ನು ಮೊದಲು ಬಾರಿಗೆ ಅನುಭವಿಸಿದ ಹರ್ಷನು, ಪುಲ ಕೇಶಿಯು ತನಗೆ ತಕ್ಕಂತಹ ಶತ್ರುವೆಂದು ಒಪ್ಪಿಕೊಳ್ಳಬೇಕಾಯಿತು. ಹರ್ಷನ ಸೋಲಿನಿಂದ ಪುಲಕೇಶಿಯು 'ಪರಮೇಶ್ವರ' ಎಂಬ ಹೊಸ ಬಿರುದು ಪಡೆದನು. ಹರ್ಷನ ರಾಜ್ಯವಿಸ್ತಾರದ ದಾಹ ನಿಂತು ಹೋಯಿತು. ತನ್ನ ಆ ಮೊದಲನೆಯ ಸೋಲೇ ತನಗೆ ಕಡೆಯ ಸೋಲೆಂದು ನಿಶ್ಚಯಮಾಡಿ, ಹರ್ಷನು ಹಿಂದಿರುಗಿದನು.

ಹರ್ಷನಿಗೆ ದಕ್ಷಿಣಾಪಥದ ಆಸೆ ಬಿಟ್ಟುಹೋಯಿತು; ಗೆದ್ದ ಉತ್ತರಾಪಥವನ್ನು ಉಳಿಸಿಕೊಳ್ಳಬೇಕೆಂದು ಸಿದ್ಧನಾದನು. ಹಿಂದೆ ತನ್ನ ತಂದೆಗೆ ಸೋತ ಹೂಣರೂ ಮಾಳವರೂ ಪುನಃ ಮೇಲೆದ್ದು ತಿರುಗಿ ಬಿದ್ದುದನ್ನು ಅವನು ಮರೆತಿರಲಿಲ್ಲ. ಅದೇ ದೃಷ್ಟಿಯಿಂದ, ತನಗೆ ಸೋತವರು ಯಾರೂ ಪುನಃ ತನ್ನ ಮೇಲೆ ಏಳಬಾರದ ರೀತಿಯಲ್ಲಿ ತನ್ನ ಸೇನೆಯನ್ನು ಬಲಪಡಿಸಿಕೊಂಡನು. ಅವನ ಅಶ್ವಸೇನೆಯ ಸಂಖ್ಯೆ ಲಕ್ಷಕ್ಕೆ ಏರಿತು. ತನ್ನನ್ನು ಜಯಿಸಿದ ಪುಲಕೇಶಿಯ ಅಸಾಧ್ಯವಾದ ಗಜಬಲವನ್ನು ಅವನು ಮರೆತಿರಲಿಲ್ಲ; ತನ್ನ ಗಜಬಲವನ್ನು ಅರುವತ್ತು ಸಾವಿರಕ್ಕೆ ಹೆಚ್ಚಿಸಿದನು. ಹೀಗೆ ಅರಿಭಯಂಕರವಾದ ಸೇನೆಯನ್ನು ನಿರ್ಮಿಸಿ, ಹರ್ಷನು, ಮುಂದಿನ ರಾಜ್ಯಭಾರದಲ್ಲಿ ಆಯುಧದ ಯೋಚನೆ ಕೂಡ ಇಲ್ಲದೆ, ಶಾಂತತೆಯಿಂದ ಆಳಿದನು.

## ಸಕಲೋತ್ತರಾಪಥೇಶ್ವರ

ಹರ್ಷನನ್ನು ಸಕಲೋತ್ತರಾಪಥೇಶ್ವರನೆಂದ ಕೂಡಲೆ, ಆತನು ಉತ್ತರದ ಹಿಂದುಸ್ಥಾನವನ್ನೆಲ್ಲ ತಾನೇ ಆಳುತ್ತಿದ್ದನೆಂದು ತಿಳಿಯ ಬಾರದು. ಉತ್ತರ ಹಿಂದೂಸ್ಥಾನದ ಕೆಲವು ಪ್ರಾಂತ್ಯಗಳನ್ನು ಮಾತ್ರ

ಆತನು ತಾನೇ ಸ್ವಂತವಾಗಿ ಆಳುತ್ತಿದ್ದನು. ಇನ್ನು ಕೆಲವು ಪ್ರಾಂತ್ಯಗಳು ಆತನ ಅಧೀನವಾಗಿ ತಮ್ಮನ್ನು ತಾವೇ ಆಳಿಕೊಳ್ಳುತ್ತಿದ್ದವು. ಆ ಪ್ರಾಂತ್ಯಗಳನ್ನು ಗೆದ್ದವನು, ಅಲ್ಲಿಯ ದೊರೆಯನ್ನು ಅಲ್ಲಿಯೇ ನಿಲ್ಲಿಸುತ್ತಿದ್ದನು; ಆ ದೊರೆಯು ಗೆದ್ದವನ ಸ್ವಾಮ್ಯವನ್ನು ಒಪ್ಪಿಕೊಂಡು, ಶಾಂತಿ ಸಂಗ್ರಾಮ ಸಮಯಗಳಲ್ಲಿ ತನ್ನ ಅಧಿರಾಜನು ಬಯಸಿದ ಸಹಾಯವನ್ನು ನೀಡಿಯೇ ತೀರಬೇಕಾಗಿತ್ತು. ಹೀಗೆ ಅಧಿರಾಜನಾದವನ ರಾಜ್ಯವೂ ಅವನಿಗೆ ವಶವಾದ ಇತರ ರಾಜ್ಯಗಳೂ ಸೇರಿ ಆದ ಸಂಸ್ಥೆಗೆ 'ಮಂಡಲ', 'ಚಕ್ರ' ಎಂದು ಕರೆಯುತ್ತಿದ್ದರು. ಈ ವಶವರ್ತಿಗಳ ಮಂಡಲವು ಅಧಿರಾಜನ ಮಾತಿನಂತೆ ನಡೆಯಬೇಕಾಗಿತ್ತು. ಈ ಅರ್ಥದಲ್ಲಿ ಹರ್ಷನೂ ಮಂಡಲೇಶ್ವರನಾಗಿದ್ದನು, ಚಕ್ರವರ್ತಿಯಾಗಿದ್ದನು, ಮಹಾರಾಜಾಧಿರಾಜನಾಗಿದ್ದನು. ಈ ತೆರದ ಆಧಿರಾಜ್ಯದಲ್ಲಿ ಹರ್ಷನು ತಾನೇ ಆಳುತ್ತಿದ್ದ ರಾಜ್ಯಗಳಾವುವು, ಆತನ ಒಡೆತನವನ್ನು ಒಪ್ಪಿದ ರಾಜ್ಯಗಳಾವುವು ಎಂಬುದನ್ನು ಮುಂದೆ ನೋಡೋಣ.

ಅಧೀನವಾದ ಆ ರಾಜ್ಯಗಳಲ್ಲಿ ಕೆಲವು ಆತನ ಪರಾಕ್ರಮಕ್ಕೆ ಅಧೀನವಾದುವು, ಕೆಲವು ಮೈತ್ರಿಗೆ ಅಧೀನವಾದುವು. ಅಲ್ಲದೆ ಆ ರಾಜ್ಯಗಳಲ್ಲಿ ಕೆಲವು ಆತನ ತಂದೆಯಾದ ಪ್ರಭಾಕರವರ್ಧನನು ಬಿಟ್ಟು ಹೋದವು; ಇನ್ನು ಕೆಲವು ಆತನು ತಾನೇ ಸ್ವಾಧೀನಪಡಿಸಿಕೊಂಡವು.

ಹೂಣರ ದೇಶ, ಮಾಳವ, ಗುಜರಾತು, ಲಾಟರನಾಡು, ಸಿಂಧು ಪ್ರಾಂತ್ಯ, ಗಾಂಧಾರಗಳು ಪ್ರಭಾಕರವರ್ಧನನಿಗೆ ಅಧೀನವಾಗಿದ್ದುವು. ಅವರಲ್ಲಿ ಹೂಣರೂ ಮಾಳವರೂ ರಾಜ್ಯವರ್ಧನನ ಕಾಲದಲ್ಲಿ ತಿರುಗಿಬಿದ್ದರು. ಅದರ ಪರಿಣಾಮವೇನಾಯಿತೆಂದು ತಿಳಿಯುವಂತಿಲ್ಲ. ಹರ್ಷನು ರಾಜ್ಯಕ್ಕೆ ಬರುವ ವೇಳೆಗೆ ಗಾಂಧಾರವಂತೂ ವರ್ಧನರಾಜ್ಯದ ಕೈಬಿಟ್ಟು ಹೋಗಿತ್ತು. ಗೂರ್ಜರರು ಪೂರ್ವದಲ್ಲಿದ್ದ ಹರ್ಷನ ರಾಜ್ಯದ ಗೋಜಿಗೆ ಹೋಗದೆ, ಪಶ್ಚಿಮದ ಕಡೆ ವಿಸ್ತರಿಸಿಕೊಂಡರು; ಹರ್ಷನಿಗೆ ಸೋತ ವಲ್ಲಭೀರಾಜನಿಗೆ ಆಶ್ರಯಕೊಟ್ಟು, ಲಾಟರನ್ನು ಗೆದ್ದು, ದಕ್ಷಿಣದ ಕಡೆ ವಿಂಧ್ಯದಿಂದ ಆಚೆ ಹೋಗಲಾರದೆ ಇಮ್ಮಡಿ ಪುಲಕೇಶಿಗೆ ಅಧೀನರಾದರು. ಮಿಕ್ಕವರೂ ಹೀಗೆಯೆ ವರ್ಧನ ವಂಶದಿಂದ ಬೇರೆಯಾಗಿರಬಹುದು.

ಉಳಿದ ಉತ್ತರಭಾಗವೆಲ್ಲ ಹರ್ಷನಿಗೆ ಕರಗತವಾಗಿತ್ತೆಂದು ಹೇಳ ಬಹುದು. ಆದರೆ ಬಂಗಾಳದ ಕಡೆ ಕರ್ಣಸುವರ್ಣ ಮಾತ್ರ ಅವನಿಗೆ ಬಗ್ಗಲಿಲ್ಲ. ಅಲ್ಲಿಯ ದೊರೆಯಾದ ಶಶಾಂಕನೇ ರಾಜ್ಯವರ್ಧನನನ್ನು ಮೋಸದಿಂದ ಕೊಂದುದು. ಹರ್ಷನು ತನ್ನ ಪ್ರತಿಜ್ಞೆಯ ಮೇರೆ ಶಶಾಂಕ ನನ್ನು ಶಿಕ್ಷಿಸಲಾಯಿತೊ ಇಲ್ಲವೊ ಸ್ಪಷ್ಟವಾಗಿ ಗೊತ್ತಿಲ್ಲ ಏಕೆಂದರೆ ಶಶಾಂಕನು ಕೊಂಚ ಕಾಲ ಮಹಾರಾಜಾಧಿರಾಜನಾಗಿದ್ದು, ತನ್ನದೇ ಮಂಡಲವನ್ನು ಸ್ಥಾಪಿಸಿ ಶಶಾಂಕಮಂಡಲವೆಂದು ಹೆಸರಿಟ್ಟಿದ್ದನು. ಆದರೆ ಕೊಂಚ ಕಾಲದ ಮೇಲೆ ಕರ್ಣಸುವರ್ಣವು ಕಾಮರೂಪದ ಭಾಸ್ಕರ ವರ್ಮನಿಗೆ ವಶವಾಯಿತು. ಭಾಸ್ಕರವರ್ಮನು ಮೊದಲಿನಿಂದಲೂ ಹರ್ಷ ನಿಗೆ ಶರಣಾಗಿದ್ದುದರಿಂದ ಅದು ಕೂಡ ಹರ್ಷನ ರಾಜ್ಯಕ್ಕೇ ಸೇರಿತು.

ಉಡ್ರ ಅಥವ ಒರಿಸ್ಸ ಕೂಡ ಹರ್ಷನಿಗೆ ಸೇರಿತ್ತು. ಹರ್ಷನು ಕೊಂಗ್ಯೋಧ ಅಥವ ಗಂಜಾಮಿನ ಮೇಲೆ ದಂಡೆತ್ತಿ ನಡೆದಾಗ ಉಡ್ರದಲ್ಲಿ ತಂಗಿದ್ದನು. ಅಲ್ಲಿ ಬೌದ್ಧಧರ್ಮದ ಪ್ರಚಾರಕ್ಕಾಗಿ ಸಭೆ ನಡೆಸಿ, ನಾಲಂದ ವೆಂಬ ವಿದ್ಯಾಲಯದಿಂದ ಬೌದ್ಧ ಭಿಕ್ಷುಗಳನ್ನು ಕರೆಸಿದನು. ಅಲ್ಲಿ ಇದ್ದ ಪ್ರಸಿದ್ಧ ಬೌದ್ಧ ವಿದ್ವಾಂಸನಾದ ಜಯಸೇನನಿಗೆ ಅಲ್ಲಿಯ ಎಂಬತ್ತು ಪಟ್ಟಣಗಳ ಹುಟ್ಟುವಳಿಯನ್ನು ನೀಡಿದನು. (ಆದರೆ ಆ ಬೌದ್ಧ ಭಿಕ್ಷು ಅದನ್ನು ತೆಗೆದುಕೊಳ್ಳಲಿಲ್ಲ!)

ಹರ್ಷನ ಸ್ವಂತ ಆಳ್ವಿಕೆಯಲ್ಲಿದ್ದ ಭಾಗವಿಷ್ಟು. ಆತನ ಪ್ರಭಾವ ಹರಡಿ, ಆತನ ಚಕ್ರವರ್ತಿತ್ವವನ್ನು ಒಪ್ಪಿದ ಭಾಗಗಳಾವುವೆಂದು ತಿಳಿಯ ಬೇಕಾದರೆ ಹರ್ಷನ ಜೀವನದಲ್ಲಿ ನಡೆದ ಕೆಲವು ಸಂಗತಿಗಳ ಪರಿಚಯ ವಾಗಬೇಕು. ಹರ್ಷನ ರಾಜ್ಯವಿಸ್ತರಣವು ಪರಾಕ್ರಮದಿಂದಲ್ಲದೆ ಮೈತ್ರಿ ಯಿಂದಲೂ ಆಯಿತೆಂದು ಹಿಂದೆ ಹೇಳಿದೆ.

ಪಂಜಾಬಿನ ಬಳಿಯ ಜಾಲಂಧರದ ಉದಿತನೆಂಬ ದೊರೆಯು ಬೌದ್ಧನಾಗಲು, ಹರ್ಷನು ಅವನ ಶ್ರದ್ಧೆಗೆ ಮೆಚ್ಚಿ, ಸಕಲ ಹಿಂದೂದೇಶ ದಲ್ಲಿ ಬೌದ್ಧಧರ್ಮದ ಮೇಲ್ವಿಚಾರಣೆಗೆ ಅವನನ್ನು ನಿಯಮಿಸಿದನು. ಹುಯೆನ್‌ತ್ಸಾಂಗನು ತನ್ನ ರಾಜ್ಯದಿಂದ ಹೊರಟಮೇಲೆ, ಅವನನ್ನು ಗಡಿ

ನಾಡಿನವರೆಗೂ ಸುರಕ್ಷಿತವಾಗಿ ಮುಟ್ಟಿಸಬೇಕೆಂದು ಹರ್ಷನು ಉದಿತ ನನ್ನು ಕೇಳಿದನು. ಅದರಂತೆ ಉದಿತನು ಹುಯೆನ್‌ತ್ಸಾಂಗನಿಗೆ ಬೇಕಾದ ರಕ್ಷಣೆಗಳನ್ನು ಒದಗಿಸಿ, ಚೀನವನ್ನು ಮುಟ್ಟುವವರೆಗೂ ಅವನಿಗೆ ಬೇಕಾದ ವಾಹನಾದಿ ಸೌಕರ್ಯಗಳನ್ನು ಸಿದ್ಧಗೊಳಿಸಲು ಆಜ್ಞಾಪಿಸಿದನು. ಅದರಂತೆಯೇ ದೂರದ ಕಪಿಶರಾಜ್ಯದ ದೊರೆ ಕೂಡ ಹುಯೆನ್‌ತ್ಸಾಂಗ ನೊಡನೆ ದಾರಿನಡೆದು, ಹರ್ಷನ ಇಚ್ಛೆಯನ್ನು ಗೌರವಿಸಿದನು.

ಅಸ್ಸಾಮಿನ ದೊರೆಯು ಹರ್ಷನ ದಿಗ್ವಿಜಯ ಪ್ರಾರಂಭದಲ್ಲೇ ಅವನ ಮೈತ್ರಿಯನ್ನು ಸಂಪಾದಿಸಿದ್ದನಷ್ಟೆ. ಅವನು ಹುಯೆನ್‌ತ್ಸಾಂಗನನ್ನು ಬಲವಂತದಿಂದ ತನ್ನ ದೇಶಕ್ಕೆ ಬರಮಾಡಿಕೊಂಡು, ಆತನನ್ನು ಕಳು ಹಿಸಿಕೊಡಬೇಕೆಂಬ ಹರ್ಷನ ಪ್ರಾರ್ಥನೆಯನ್ನು ತಿರಸ್ಕರಿಸಿದನು. ತಿರಸ್ಕರಿಸಿದರೂ, ಕೂಡಲೆ ಹೆದರಿ ಅವನನ್ನು ಹರ್ಷನ ಬಳಿಗೆ ಕಳುಹಿಸಿ ಕೊಟ್ಟನು.

ಹುಯೆನ್‌ತ್ಸಾಂಗನು ಬಂದಾಗ ಹರ್ಷನು ಪ್ರಯಾಗದ ಬಳಿ ಒಂದು ಧರ್ಮಸಭೆ ನಡೆಸಿದನು. ಆಗ ಅವನ ಪರಿವಾರವಾಗಿ ಬಂದವರು ಯಾರು? ವಲ್ಲಭೀರಾಜ್ಯದ ಅರಸನಾದ ಧ್ರುವಭಟ್ಟ, ಕಾಮರೂಪ ದೇಶಾಧಿಪನಾದ ಕುಮಾರರಾಜ ಮತ್ತು ಪಂಚಹಿಂದೂ ಪ್ರಾಂತ್ಯಗಳ ದೊರೆಗಳು ಹದಿನೆಂಟುಮಂದಿ!

ಹರ್ಷನ ಪ್ರಭಾವವು ಈ ರೀತಿ ಹಿಂದೂದೇಶದಲ್ಲಿ ಹರಡಿದುದು ಮಾತ್ರವಲ್ಲ; ಅವನ ಕೀರ್ತಿ ಚೀನಾದೇಶದವರೆಗೂ ಹಬ್ಬಿತು. ಅದರ ಫಲವಾಗಿ ಚೀನಾಚಕ್ರವರ್ತಿಗೂ ಹರ್ಷನಿಗೂ ಸಂಬಂಧ ಬೆಳೆಯಿತು. ಅಲ್ಲಿಂದ ಇಲ್ಲಿಗೂ ಇಲ್ಲಿಂದ ಅಲ್ಲಿಗೂ ದೌತ್ಯ ಆಗಾಗ್ಗೆ ನಡೆಯುತ್ತಿತ್ತು.

ಉತ್ತರ ಹಿಂದೂಸ್ಥಾನದಲ್ಲಿ ಹರ್ಷನ ರಾಜ್ಯಕ್ಕೆ ಸೇರದ ಪ್ರಾಂತ್ಯ ಗಳನ್ನು ಗಣಿಸದಿದ್ದರು ಕೂಡ, ಆ ಕಾಲದ ಉತ್ತರದ ಯಾವೊಂದು ರಾಜ್ಯಕ್ಕಿಂತ ಹರ್ಷನ ರಾಜ್ಯವು ಬಹುಪಾಲು ದೊಡ್ಡದೆಂದು ಯಾರಾ ದರೂ ಒಪ್ಪಲೇಬೇಕು. ಈಗಿನ ಸಂಯುಕ್ತಪ್ರಾಂತ್ಯ; ಬಿಹಾರ ಬಂಗಾಳಗಳ ಬಹುಭಾಗ; ಒರಿಸ್ಸ; ಪಂಜಾಬು, ರಾಜಪುತ್ರಸ್ಥಾನ, ಮಧ್ಯ

ಹಿಂದೂದೇಶ, ಪಶ್ಚಿಮಹಿಂದೂದೇಶಗಳ ಬಹುಪಾಲು—ಇವುಗಳನ್ನು ಒಳಗೊಂಡು ಹಿಮಾಲಯದಿಂದ ರೇವಾನದಿಯವರೆಗೆ ಹರಡಿದ ಉತ್ತರಾಪಥವನ್ನು ಆಳಿದ ಮಹಾರಾಜಾಧಿರಾಜ ಶ್ರೀ ಹರ್ಷನನ್ನು ದಕ್ಷಿಣಾಪಥದ ಶಾಸನಗಳು ಕೂಡ 'ಸಕಲೋತ್ತರಾಪಥೇಶ್ವರ' ಎಂದು ಸಂಬೋಧಿಸಿರುವುದರಲ್ಲಿ ಆಶ್ಚರ್ಯವೇನು ?

## ಹರ್ಷನ ರಾಜ್ಯವೈಭವ

ಹರ್ಷನ ಈಶ್ವರತ್ವವನ್ನು ತಿಳಿಯಬೇಕಾದರೆ, ಆತನ ರಾಜ್ಯದ ವಿಸ್ತಾರವನ್ನು ತಿಳಿದರೆ ಸಾಲದು ; ಆ ರಾಜ್ಯವನ್ನು ಆತನು ಹೇಗೆ ಅನುಭೋಗಿಸುತ್ತಿದ್ದನೆಂಬುದನ್ನೂ ತಿಳಿಯಬೇಕು. ಚಕ್ರವರ್ತಿಗೆ ಅನುಗುಣವಾದ ವೈಭವವು ಹರ್ಷನ ರಾಜ್ಯದಲ್ಲಿ ಕಂಡುಬರುತ್ತಿತ್ತೆಂಬುದಕ್ಕೆ ಕಣ್ಣೆದುರಿಗಿದ್ದ ಬಾಣ ಹುಯೆನ್‌ತ್ಸಾಂಗರೇ ಸಾಕ್ಷಿ. ಅವರಿಬ್ಬರ ವರ್ಣನೆಗಳಲ್ಲಿ ಹುಯೆನ್‌ತ್ಸಾಂಗನು ಕಂಡುದನ್ನು ಮುಂದಿನ ಅಧ್ಯಾಯದಲ್ಲಿ ಹೇಳಬೇಕಾಗಿರುವುದರಿಂದ, ಬಾಣನು ಕಂಡುದನ್ನು ಮಾತ್ರ ಇಲ್ಲಿ ನೋಡೋಣ.

ಬಾಣನು ಹರ್ಷನನ್ನು ಕಾಣಲು ಹೋದಾಗ, ಚಕ್ರವರ್ತಿಯು ಅಜಿರವತೀನದಿಯ ಬಳಿ ಶಿಬಿರ ಮಾಡಿದ್ದನು. ಅಲ್ಲಿಯ ರಾಜಭವನದ ಮಹಾದ್ವಾರದ ಒಂದು ಕಡೆ ಆನೆಯ ಹಿಂಡು ಕಪ್ಪಾಗಿ ದಟ್ಟವಾಗಿ ನಿಂತಿತ್ತು. ಅನೇಕ ಕಾರಣಗಳಿಂದ ಅನೇಕರು ತಂದು ಒಪ್ಪಿಸಿದ ಆ ನಾಗಸಂಘವು ಅಗಣಿತವಾಗಿತ್ತು. ಇನ್ನೊಂದು ಕಡೆ ವೇಗದಲ್ಲಿ ಜಿಂಕೆಗಳನ್ನೂ ಮೀರಿಸುವ ಕುದುರೆಗಳ ಸಾಲು ನಿಂತಿತ್ತು. ನಿಲ್ಲಲಾರದೆ, ಕುಣಿದಾಡುವ ಆ ಕುದುರೆಗಳ ಸಾಲು ನೋಡಿದರೆ, ಸಮುದ್ರದ ಅಲೆಗಳ ಮಾಲೆಯ ಹಾಗಿತ್ತು. ಬೇರೊಂದು ಪಾರ್ಶ್ವದಲ್ಲಿ, ಭೂಮಿಗೆ ಕಪಿಲವರ್ಣ ಮೆತ್ತಿದಂತೆ ದಟ್ಟವಾಗಿ ನಿಂತ ಒಂಟೆಗಳ ಸಾಲು ನಿಂತಿತ್ತು. ಅವುಗಳ ಬಾಯಿಗೆ ಕವಡೆಗಳ ಮಾಲೆ ಕಟ್ಟಿದ್ದರು ; ನಿರಂತರವಾಗಿ ಝುಣಝುಣರೆನುವ ಚಿನ್ನದ ಆಭರಣಗಳಿಂದ ಅವುಗಳನ್ನು ಅಲಂಕರಿಸಿದ್ದರು. ಮತ್ತೊಂದು ದಿಕ್ಕಿನಲ್ಲಿ, ನೋಡಬೇಕೆಂದರೆ ಬರಿಯ ಬೆಳ್ಗೊಡೆಗಳ ಮೊತ್ತವೇ ! ಅದನ್ನು ನೋಡಿದರೆ ಭೂಮಿ ಚಂದ್ರನಾದಂತೆ, ಹಗಲು

ತಿಂಗಳಾದಂತೆ, ಇಂದ್ರನ ವೈಭವವನ್ನು ತಿರಸ್ಕರಿಸಲು ತಲೆಯೆತ್ತಿದ ಅಸಂಖ್ಯಾತವಾದ ಚಂದ್ರಪ್ರಭೆಗಳಂತೆ ಇತ್ತು. ಇನ್ನೊಂದು ದಿಕ್ಕಿನಲ್ಲಿ ಪರಿವಾರದವರು ನಿಲ್ಲದೆ ಬೀಸುತ್ತಿದ್ದ ಚಾಮರಗಳು ಎದ್ದು ಬೀಳುತ್ತಿದ್ದುವು.

ಶಿಬಿರದ ಯಾವ ಕಡೆ ನೋಡಿದರೂ ಪರಾಜಿತರಾದ ದೊರೆಗಳು ಕಂಡುಬರುತ್ತಿದ್ದರು. ಒಳಗೆ ಪ್ರವೇಶ ಸಿಕ್ಕದಿದ್ದ ಕೆಲವರು ನಾಚುಗೆಯಿಂದ ತಲೆ ತಗ್ಗಿಸಿದ್ದರು; ಕೆಲವರು ಚಾಮರಗಳನ್ನು ಹಿಡಿದು ಸೇವೆ ಮಾಡುತ್ತಿದ್ದರು. ಹರ್ಷನಿಗೆ ಸೋತುದೇ ತಮಗೊಂದು ಗೌರವವೆಂದು ಕೆಲವರು ಭಾವಿಸುತ್ತಿದ್ದರು. ಎಲ್ಲರೂ ರಾಜದ್ವಾರದ ಬಳಿ ಕಾದು ನಿಂತು, ಒಳಗೆ ಹೋಗಿ ಹೊರಗೆ ಬರುವ ಪ್ರತಿಹಾರಿಗಳನ್ನು 'ಭದ್ರ, ಈ ದಿನ ರಾಜದರ್ಶನವಾದೀತೆ? ರಾಜನು ನಮ್ಮನ್ನು ಕರೆಸಿಯಾನೆ? ರಾಜನು ಹೊರಗೆ ಬಂದಾನೆ?' ಎಂದು ಪ್ರಶ್ನಿಸುತ್ತ, ಪರಮೇಶ್ವರನನ್ನು ಕಾಣಲು ತವಕಿಸುತ್ತಿದ್ದರು. ಆತನ ವೈಭವವನ್ನು ನೋಡಬೇಕೆಂಬ ಕುತೂಹಲವೊಂದರಿಂದಲೇ ಬಂದವರು ಕೂಡ ಅಲ್ಲಿದ್ದರು. ಬಾಣನು ಅವರೆಲ್ಲರನ್ನೂ ನೋಡುತ್ತ ಬಂದನು; ಮುಖ್ಯದ್ವಾರಪಾಲಕರನ್ನು ದಾಟಿ ರಾಜಗೃಹದ ಬಾಗಿಲನ್ನು ಕಳೆದನು.

ಅಲ್ಲಿ ದೊರೆಯ ಕುದುರೆಯ ಲಾಯವಿತ್ತು. ಅದರಲ್ಲಿ ವನಾಯು, ಆರಟ್ಟ, ಕಾಂಭೋಜ, ಭಾರದ್ವಾಜ, ಸಿಂಧು, ಪರ್ಶಿಯಾದೇಶಗಳಿಂದ ಬಂದ ಕುದುರೆಗಳಿದ್ದುವು. ಆ ಜಾತ್ಯಶ್ವಗಳನ್ನು ಕಂಡು ಆಶ್ಚರ್ಯಪಡುತ್ತ, ಬಾಣನು, ಎಡಭಾಗದಲ್ಲಿ ಅಸ್ಪಷ್ಟವಾಗಿ ಕಾಣುತ್ತಿದ್ದ ಗಜಶಾಲೆಯನ್ನು ಗಮನಿಸಿದನು. ಅಲ್ಲಿಯೇ, ಅರಸನಿಗೆ ಎರಡನೆಯ ಜೀವದಂತಿದ್ದ ದರ್ಪಶಾತವೆಂಬ ಆನೆಯಿದ್ದುದು. ಆ ಆನೆಯ ಮದಜಲದ ಸುಗಂಧವನ್ನು ಸವಿಯುತ್ತ, ಸಾಮಂತರಾಜರು ಕಿಕ್ಕಿರಿದು ತುಂಬಿದ್ದ ಮೂರು ಅಂತರ್ಗೃಹಗಳನ್ನು ದಾಟಿ, ಬಾಣನು ನಾಲ್ಕನೆಯ ಅಂತರ್ಗೃಹದಲ್ಲಿ ಚಕ್ರವರ್ತಿಯನ್ನು ಕಂಡನು.

ಹರ್ಷನು, ತೊಳೆದ ಮುತ್ತಿನಂತೆ ತೊಳಗುತ್ತಿದ್ದ ಶಿಲಾಸಿಂಹಾಸನದ ಮೇಲೆ ಕುಳಿತಿದ್ದನು. ಅವನ ಪಾದಗಳಡಿಯ ಕಾಲುಮಣೆಯು ಅಮೂಲ್ಯ

ವಾದ ಪಚ್ಚೆಗಳಿಂದ ಮಾಡಿತ್ತು; ಅದರ ಸುತ್ತ ಕೆಂಪಿನ ಅಂಚು ಕಟ್ಟಿತ್ತು. ಅವನ ಆರು ಆರು ಅಡಿ ಎತ್ತರದ ಪರಿಚಾರಕಗಣವು ದೂರದಲ್ಲಿ ಸಾಲಾಗಿ ನಿಂತಿತ್ತು. ಅವನಿಗೆ ಆಪ್ತರಾದ ರಾಜಪುತ್ರರು ಮಾತ್ರ ಅವನ ಬಳಿಯಲ್ಲಿ ಕುಳಿತಿದ್ದರು.

ಬಾಣನು ಇನ್ನೊಂದು ಕಡೆ, ಹರ್ಷನು ಸ್ನಾನಮಾಡುವುದಕ್ಕೆ ಚಿನ್ನ ಬೆಳ್ಳಿಯ ಪಾತ್ರೆಗಳನ್ನು ಉಪಯೋಗಿಸುತ್ತಿದ್ದನೆಂದು ಹೇಳಿದ್ದಾನೆ. ಹರ್ಷನು ಅನೇಕ ಮಣಿಖಚಿತವಾದ ಪಾತ್ರೆಗಳನ್ನೂ, ಸಾವಿರಾರುಗಟ್ಟಲೆ ಚಿನ್ನ ಬೆಳ್ಳಿಗಳನ್ನೂ, ಅಸಂಖ್ಯಾತವಾದ ಗೋವುಗಳನ್ನೂ ಬ್ರಾಹ್ಮಣರಿಗೆ ದಾನ ಕೊಟ್ಟನಂತೆ; ಆ ಗೋವುಗಳ ಗೊರಸಿಗೂ ಕೊಂಬಿನ ತುದಿಗೂ ಚಿನ್ನದ ಬಳ್ಳಿಗಳನ್ನು ಸುತ್ತಿದ್ದರಂತೆ!

ದೊರೆಯು ಪ್ರಯಾಣ ಹೊರಟನೆಂದರೆ, ಅವನ ಕೂಲಿಯಾಳುಗಳು ಚಿನ್ನದ ಕಾಲುಮಣೆಗಳು, ನೀರಿನ ಪಾತ್ರೆಗಳು, ಬಟ್ಟಲುಗಳು, ಕೈ ತೊಳೆಯುವ ಪಾತ್ರೆಗಳು, ಸ್ನಾನದ ಪಾತ್ರೆಗಳು ಮೊದಲಾಗಿ ಎಲ್ಲವನ್ನೂ ಹೊತ್ತು ಹೊರಡುತ್ತಿದ್ದರು. ಇನ್ನು ಕೆಲವರು ಅಡಿಗೆಗೆ ಬೇಕಾದುದನ್ನು ತೆಗೆದುಕೊಂಡು ನಡೆಯುತ್ತಿದ್ದರು: ಕುರಿಗಳ ಕತ್ತಿಗೆ ಹಂದಿಯ ಚರ್ಮದ ದಾರ ಬಿಗಿದು ಎಳೆದುಕೊಂಡು ಹೋಗುವರು; ಗುಬ್ಬಚ್ಚಿಗಳ ಗುಂಪಿನೊಡನೆ ಜಿಂಕೆಯ ಮಾಂಸವನ್ನೂ ಮೊಲದ ಮರಿಗಳನ್ನೂ ಹೊತ್ತು ನಡೆಯುವರು; ಅಡುಗೆಗೆ ಬೇಕಾದ ಸಕಲ ಪರಿಕರಗಳನ್ನೂ ಜೊತೆಯಲ್ಲಿ ಒಯ್ಯುವರು; ಪಾತ್ರೆಗಳಲ್ಲಿ ಮೊಸರು ತುಂಬಿ, ಬಿಳಿಯ ಬಟ್ಟೆಯಿಂದ ಆ ಪಾತ್ರೆಗಳ ಬಾಯಿಕಟ್ಟಿ ಮುದ್ರೆ ಹಾಕಿ ತೆಗೆದುಕೊಂಡು ಹೋಗುವರು; ಇಷ್ಟೇ ಅಲ್ಲದೆ, ಅಡುಗೆಗೆ ಬೇಕಾದ ಒಲೆಗಳೂ ಜೊತೆಯಲ್ಲಿ ಅಡುಗೆಯ ಪಾತ್ರೆಗಳೂ ಅರಸನ ಹಿಂದೆಯೇ ಹೊರಡುವುದು. ಹೋದ ಕಡೆಯಲ್ಲೆಲ್ಲ ದೊರೆಗೂ ಆತನ ಪರಿವಾರಕ್ಕೂ ಬೇಕಾದುದನ್ನು ಒದಗಿಸಲು ನಾಡಿಗರು ಕಾದುಕೊಂಡಿರುತ್ತಿದ್ದರು.

ಇದು ಹರ್ಷನು ರಾಜಧಾನಿಯನ್ನು ಬಿಟ್ಟು ಪ್ರಯಾಣ ಮಾಡುವಾಗ ತಂಗಿದ್ದ ಶಿಬಿರಗಳಲ್ಲಿ ಒಂದರ ದೃಶ್ಯ. ಹೀಗೆ ಪ್ರಯಾಣ ಹೊರ

ಟಾಗ ಕೂಡ ಸಾವಿರ ಭಿಕ್ಷುಗಳಿಗೂ ಐನೂರು ಬ್ರಾಹ್ಮಣರಿಗೂ ಪ್ರತಿ ದಿನವೂ ದೊರೆಯ ಪಾಕಶಾಲೆಯಿಂದ ಭೋಜನ ದೊರೆಯುತ್ತಿತ್ತು !

## ಹರ್ಷನ ರಾಜ್ಯಭಾರ

ಪುಲಕೇಶಿಯೊಡನೆ ನಡೆಸಿದ ಯುದ್ಧವೇ ಹರ್ಷನು ನಡೆಸಿದ ಕಡೆಯ ಯುದ್ಧವೆಂದು ಹಿಂದೆ ಹೇಳಿತು. ಅದಾದನಂತರ ಹರ್ಷನು ಮೂವತ್ತು ವರ್ಷಗಳು ಶಾಂತಿಯಿಂದ ರಾಜ್ಯಭಾರ ಮಾಡಿದನು. ಹಿಂದೆ ಅವನ ತಂದೆ ಅಣ್ಣಂದಿರ ಕಾಲದಲ್ಲಿ ಹೂಣರೂ ಮಾಳವರೂ ತಿರುಗಿಬಿದ್ದ ರೀತಿಯಲ್ಲಿ, ಅವನಿಗೆ ಪರಾಜಿತರಾದವರು ಯಾರೂ ಅವನ ಮೇಲೆ ತಿರುಗಿ ಬೀಳಲಿಲ್ಲ. ಅಷ್ಟು ವಿಸ್ತಾರವಾದ ರಾಜ್ಯವನ್ನು ಕಟ್ಟಿಕೊಂಡು ಕೂಡ, ಯಾವ ರಾಜನಿಂದಲೂ ತೊಂದರೆಗೊಳಗಾಗದೆ ಹರ್ಷನು ಮೂವತ್ತು ವರ್ಷ ಮಹಾರಾಜಾಧಿರಾಜನಾಗಿ ಆಳಿದನೆಂದರೆ, ಆತನ ರಾಜ್ಯಭಾರದ ಕೌಶಲವೆಷ್ಟಿರಬೇಕು !

ಆ ಕೌಶಲವು ಹರ್ಷನಿಗೆ ಸ್ವಪ್ರಯತ್ನದಿಂದ ಲಭಿಸಿದುದು. ಹರ್ಷನು ತಾನು ರಾಜ್ಯಗಳನ್ನು ಜಯಿಸಿದ ಮಾತ್ರದಿಂದಲೇ ತೃಪ್ತನಾಗ ಲಿಲ್ಲ. ಅಷ್ಟು ರಾಜ್ಯಗಳನ್ನು ಜಯಿಸಿ ಅಧಿರಾಜನಾದವನ ಕರ್ತವ್ಯ ವೇನೆಂದು ಅವನಿಗೆ ಚೆನ್ನಾಗಿ ಗೊತ್ತಿತ್ತು. ಅದರಿಂದ ತನ್ನ ರಾಜ್ಯದ ಆಡಳಿತವನ್ನು ನೋಡಿಕೊಳ್ಳುವುದಕ್ಕೆ ತಕ್ಕ ಅಧಿಕಾರಿಗಳನ್ನು ನೇಮಿಸಿ ದುದಲ್ಲದೆ, ತಾನೇ ಪ್ರತ್ಯಕ್ಷವಾಗಿ ಹೋಗಿ ರಾಜ್ಯದ ಪ್ರತಿಭಾಗವನ್ನೂ ಕಣ್ಣಾರೆ ಕಂಡು ಬರುತ್ತಿದ್ದನು. ಹರ್ಷನಿಗೆ ತನ್ನ ರಾಜ್ಯದ ಭಾಗ ಗಳೇನೂ ಅಪರಿಚಿತವಾಗಿರಲಿಲ್ಲ. ಚಿಕ್ಕಂದಿನಲ್ಲ, ಅಣ್ಣ ರಾಜ್ಯವರ್ಧನನು ಹೂಣರ ಮೇಲೆ ದಂಡೆತ್ತಿದಾಗ ಅವನ ಹಿಂದೆ ಹೊರಟು ಹಿಮಾಲಯ ಪ್ರಾಂತ್ಯಗಳನ್ನು ನೋಡಿ ತಿಳಿದಿದ್ದನು. ವಿಂಧ್ಯಾರಣ್ಯದಲ್ಲಿ ತಂಗಿಯನ್ನು ಹುಡುಕಿ, ಮಾಳವ ವಲ್ಲಭೀ ರಾಜ್ಯಗಳ ಮೇಲೆ ಹೋರಾಡಿ, ರೇವಾನದೀ ತೀರದಲ್ಲಿ ಪುಲಕೇಶಿಯೊಡನೆ ಕಾದಾಡಿ, ರಾಜ್ಯದ ದಕ್ಷಿಣ ಭಾಗದ ಮೂಲೆ ಮೂಲೆಯನ್ನೂ ಅವನು ಅಂಗೈಯ ಗೆರೆಯಂತೆ ತಿಳಿದಿದ್ದನು.

ರಾಜ್ಯದಲ್ಲಿ ಎಲ್ಲಿ ಏನು ಅನ್ಯಾಯ ನಡೆದರೂ, ದೊರೆ ಅಲ್ಲಿ ತಾನೇ ಪ್ರತ್ಯಕ್ಷನಾಗುತ್ತಿದ್ದನೆಂದು ಹುಯೆನ್‌ತ್ಸಾಂಗನು ತಿಳಿಸಿದ್ದಾನೆ. ಹುಯೆನ್‌ತ್ಸಾಂಗನು ಬಂದಾಗ ಹರ್ಷನು ರಾಜಧಾನಿಯಲ್ಲಿರಲಿಲ್ಲವಂತೆ; ರಾಜ್ಯದ ಬೇರೆ ಬೇರೆ ಭಾಗಗಳಲ್ಲಿ ಪ್ರಯಾಣಮಾಡುತ್ತಿದ್ದನಂತೆ. ಹುಯೆನ್‌ತ್ಸಾಂಗನು ಹರ್ಷನನ್ನು ಮೊದಲು ಕಂಡುದು ಬಂಗಾಳದ ಕಜುಘಿರದಲ್ಲಿ; ಆ ಕಾಲದಲ್ಲಿ, ಹರ್ಷನು, ಒರಿಸ್ಸದಲ್ಲಿ ತನ್ನ ಪ್ರಯಾಣವನ್ನು ಮುಗಿಸಿಕೊಂಡು ಅಲ್ಲಿ ತಂಗಿದ್ದನು. ಬಾಣನು ಹರ್ಷನನ್ನು ದರ್ಶಿಸಿದುದು ರಾಜಧಾನಿಯಲ್ಲಲ್ಲ; ಅಜಿರವತೀ ತೀರದ ಮಣಿತಾರೆಯೆಂಬ ಗ್ರಾಮದ ಬಳಿಯಲ್ಲಿ. 'ಬನ್ಸ್‌ಖೇರ ದತ್ತಿ' ಮತ್ತು 'ಮಧುವನ ದತ್ತಿ' ಎಂದು ಪ್ರಸಿದ್ಧವಾದ ಎರಡು ದಾನಶಾಸನಗಳಿಂದ, ಹರ್ಷನು ತನ್ನ ಪ್ರಯಾಣ ಕಾಲದಲ್ಲಿ ವರ್ಧಮಾಣಕೋಟಿ ಮತ್ತು ಕಪಿತ್ಥಿಕಾ ಎಂಬ ಎರಡು ಸ್ಥಳಗಳಲ್ಲಿ ತಂಗಿದ್ದನೆಂದು ತಿಳಿದು ಬರುವುದು. ಆ ಪ್ರಯಾಣಕಾಲದಲ್ಲಿ ತಂಗಿದ ಕಡೆ ಮರದ ರೆಂಬೆಗಳನ್ನೂ ಹುಲ್ಲನ್ನೂ ಉಪಯೋಗಿಸಿ ಮನೆಗಳನ್ನು ಕಟ್ಟುತ್ತಿದ್ದರು; ಅಲ್ಲಿಂದ ಮುಂದೆ ಹೊರಡುವಾಗ ಅವುಗಳನ್ನು ಸುಟ್ಟು ಬಿಡುತ್ತಿದ್ದರು. ಹೀಗೆ ಹರ್ಷನು ರಾಜ್ಯದಲ್ಲಿ ಒಂದು ಕಡೆ ನಿಲ್ಲದೆ, ಸದಾ ಪ್ರಯಾಣ ಬೆಳೆಸುತ್ತ, ರಾಜ್ಯದ ಪ್ರತಿಭಾಗವನ್ನೂ ತಾನೇ ಮೇಲು ವಿಚಾರಿಸುತ್ತಿದ್ದನು. ಆದರೆ ಮಳೆಗಾಲದ ಮೂರು ತಿಂಗಳು ಮಾತ್ರ ಹೊರಗೆ ಹೊರಡುತ್ತಿರಲಿಲ್ಲ.

ರಾಜ್ಯವನ್ನು ತಕ್ಕಂತೆ ಆಳಲು ಹರ್ಷನಿಗೆ ಬಹು ಶ್ರದ್ಧೆಯಿತ್ತು. ಪ್ರತಿ ಹಗಲನ್ನು ಮೂರುಭಾಗ ಮಾಡಿ, ಒಂದನ್ನು ರಾಜ್ಯದ ಆಡಳಿತಕ್ಕೂ, ಉಳಿದ ಎರಡನೆಯದನ್ನು ಧರ್ಮಕಾರ್ಯಗಳಿಗೂ ವಿನಿಯೋಗಿಸುತ್ತಿದ್ದನು. ಎಷ್ಟು ಕೆಲಸ ಮಾಡಿದರೂ ಅವನಿಗೆ ಶ್ರಮವೇ ತೋರುತ್ತಿರಲಿಲ್ಲವಂತೆ! ಕೆಲಸ ಮಾಡುವುದಕ್ಕೆ ಕಾಲವೇ ಸಾಕಾಗುತ್ತಿರಲಿಲ್ಲವಂತೆ! ಅದರಿಂದ ಅರಸನನ್ನು ಕಾಣಬೇಕೆಂದು ಬಂದವರು ದರ್ಶನ ಲಾಭವಿಲ್ಲದೆ ಹೇಗೆ ಕಾಯ್ದು ಕುಳಿತಿರಬೇಕಾಗಿತ್ತೆಂದು ಬಾಣನು ವರ್ಣಿಸಿದ್ದಾನೆ. ಕೆಲವು ಸಲ, ಕೆಲಸ ಮಾಡುತ್ತ ಮಾಡುತ್ತ ಅನ್ನ ನಿದ್ದೆಗಳನ್ನು ಕೂಡ ಮರೆಯುತ್ತಿದ್ದನೆಂದು ಹುಯೆನ್‌ತ್ಸಾಂಗನು ಹೇಳಿದ್ದಾನೆ.

ದೊರೆಯು ಈ ರೀತಿಯಲ್ಲಿ ತನ್ನ ಕರ್ತವ್ಯವನ್ನು ಮರೆಯದೆ ಪಾಲಿಸು ತ್ತಿರಲು, ಆತನ ಚಕ್ರವರ್ತಿತ್ವವು ಮೂವತ್ತು ವರ್ಷ ನಿರಾತಂಕವಾಗಿ ನಡೆದು ಬಂದುದರಲ್ಲಿ ಆಶ್ಚರ್ಯವೇನೂ ಇರಲಾರದು.

ಆದರೆ, ಹರ್ಷನ ಬದುಕಿನಲ್ಲಿ ನಡೆದ ಎಲ್ಲ ಸಂಗತಿಗಳನ್ನೂ ತಿಳಿ ಯಲು ಹೇಗೆ ಸಾಧನಗಳು ಸಾಲವೋ, ಅವನ ಆಡಳಿತದ ರೀತಿಯನ್ನು ತಿಳಿಯಲೂ ಅದೇ ರೀತಿಯಲ್ಲಿ ಸಾಧನಗಳು ಸಾಲವು. ಆದರೂ ಹುಯೆನ್‌ತ್ಸಾಂಗ್ ಬಾಣರ ಲೇಖನಗಳಿಂದಲೂ ಆ ಕಾಲದ ಹಲಕೆಲವು ಶಾಸನಗಳಿಂದಲೂ ಆಗಿನ ರಾಜ್ಯಭಾರ ಹೇಗಿತ್ತೆಂದು ಪಂಡಿತರು ತಿಳಿದು ತಿಳಿಸಿರುವಷ್ಟನ್ನು ನಾವೂ ತಿಳಿಯೋಣ.

ಒಬ್ಬ ರಾಜನ ಕೈಕೆಳಗಿದ್ದ ಭೂಭಾಗವನ್ನು ಆ ಕಾಲದಲ್ಲಿ 'ರಾಜ್ಯ' ವೆನ್ನುತ್ತಿದ್ದರು. ಅದನ್ನೇ 'ರಾಷ್ಟ್ರ', 'ದೇಶ', 'ಮಂಡಲ' ಎನ್ನುತ್ತಿ ದ್ದರು. ದೊಡ್ಡದಾದ ರಾಜ್ಯಗಳ ಸಣ್ಣ ವಿಭಾಗಗಳಿಗೆ 'ಭುಕ್ತಿ' ಎಂದು ಹೆಸರಿತ್ತು. ಭುಕ್ತಿಯ ಪ್ರತಿ ವಿಭಾಗಕ್ಕೆ 'ವಿಷಯ' ಎನ್ನುತ್ತಿದ್ದರು. ಪ್ರತಿ ವಿಷಯದ ಆಡಳಿತಕ್ಕೆ ಕೇಂದ್ರಸ್ಥಾನವಾದ ಭಾಗವನ್ನು 'ಅಧಿಷ್ಠಾನ' ವೆಂದು ಕರೆಯುತ್ತಿದ್ದರು. ಒಂದೊಂದು ವಿಷಯವನ್ನು ಇನ್ನೂ ಚಿಕ್ಕದಾಗಿ ಒಡೆದು, ಅದರ ಪ್ರತಿಭಾಗವನ್ನೂ 'ಗ್ರಾಮ' ವೆನ್ನುತ್ತಿದ್ದರು.

ರಾಜ್ಯದ ಸರ್ವಾಧಿಕಾರಿಯಾದ ರಾಜನಿಗೆ 'ಪರಮ ಭಟ್ಟಾರಕ' 'ಮಹಾರಾಜಾಧಿರಾಜ', 'ಪರಮೇಶ್ವರ', 'ಸಮ್ರಾಜ', 'ಏಕಾಧಿರಾಜ', 'ಪರಮದೈವತ', 'ಚಕ್ರವರ್ತಿ' ಎಂದೂ ಹೆಸರಿತ್ತು. ಅವನ ಕೆಳಗಿನ ಅಧಿ ಕಾರಿಗಳಿಗೆ ಅವರವರ ಅಧಿಕಾರವನ್ನು ಅನ್ವಯಿಸಿ 'ಮಹಾರಾಜ', 'ಮಹಾ ಸಾಮಂತ', 'ಮಹಾಪ್ರತೀಹಾರ', 'ಮಹಾದಂಡನಾಯಕ' ಮುಂತಾದ ಹೆಸರುಗಳಿದ್ದುವು. ಆ ಸಾಮಂತರಾಜರು ಶಾಂತಿಸಮಯದಲ್ಲಿ ರಾಜನ ಆಡಳಿತಕ್ಕೆ ನೆರವಾಗಿ, ಸಂಗ್ರಾಮಕಾಲದಲ್ಲಿ ಅವನೊಡನೆ ರಣಭೂಮಿಗೆ ತೆರಳಬೇಕಾಗಿತ್ತು.

ಚಕ್ರವರ್ತಿಯ ಅನಂತರದ ಮುಖ್ಯ ಅಧಿಕಾರಿಗಳೆಂದರೆ 'ಮಂತ್ರಿ' ಗಳು. ಪ್ರಭಾಕರವರ್ಧನನು ಸತ್ತಕಾಲದಲ್ಲಿ ಅವರಂತೆ ರಾಜ್ಯವು ಅನಾಯಕ

ವಾದರೆ, ಆಗ ರಾಜ್ಯದ ಉತ್ತರಾಧಿಕಾರಿಯನ್ನು ನಿರ್ಣಯಿಸುವ ಅಧಿಕಾರ ಆ 'ಮಂತ್ರಿ ಪರಿಷತ್ತಿ'ನ ಕೈಲಿತ್ತು.

ರಾಜ್ಯದ ಮಿಕ್ಕ ಅಧಿಕಾರಿಗಳಲ್ಲಿ ಮೊದಲನೆಯವನು ಭುಕ್ತಿಗೆ ಅಧಿಕಾರಿಯಾದವನು; ಅವನಿಗೆ 'ಉಪರಿಕ ಮಹಾರಾಜ' ಎಂದು ಹೆಸರು; ಆ ಸ್ಥಳಕ್ಕೆ ಕೆಲವು ಸಲ ದೊರೆಯು ಮಗನನ್ನೇ ನೇಮಿಸುತ್ತಿದ್ದರು. ಆ ಅಧಿಕಾರಿಯನ್ನು ಬಾಣನು 'ಭೋಗಪತಿ' ಎಂದು ಕರೆಯುತ್ತಾನೆ. ಆತನು ತನ್ನ ಕೈಕೆಳಗಿನ ಅಧಿಕಾರಿಗಳನ್ನು ತಾನೇ ಆರಿಸುತ್ತಿದ್ದನು; ಅವರು 'ತನ್ನಿಯುಕ್ತ'ರು. ಪ್ರತಿಭೋಗಪತಿಯೂ ತನ್ನ ಭುಕ್ತಿಯ ವಿಷಯಗಳಿಗೆ ಅಧಿಕಾರಿಗಳನ್ನು ತಾನೇ ನೇಮಿಸುವನು; ಅವರು 'ವಿಷಯಪತಿ'ಗಳು ಎನ್ನಿಸುವರು.

ಪ್ರತಿ ವಿಷಯಪತಿಗೂ ಅವನ ಅಧಿಷ್ಠಾನದಲ್ಲಿ ಒಂದೊಂದು ಕಚೇರಿಯಿರುತ್ತಿತ್ತು. ಅದನ್ನು 'ಅಧಿಕರಣ'ವೆಂದು ಕರೆಯುತ್ತಿದ್ದರು. ರಾಜ್ಯದ ಮೇಲ್ತರಗತಿಯ ಅಧಿಕಾರಿಗಳಲ್ಲಿ ವಿಷಯಪತಿಯೇ ಕಡೆಯವನು. ಅವನ ಮೇಲೆ ಉಪರಿಕ ಮಹಾರಾಜ. ಉಪರಿಕ ಮಹಾರಾಜನ ಮೇಲಿನವನು 'ಕುಮಾರಾಮಾತ್ಯ'; ರಾಜಕುಮಾರನು ಯಾವನಾದರೂ ಉಪರಿಕ ಮಹಾರಾಜನಾದರೆ, ಅವನ ಮಂತ್ರಿಯಾಗಿ ಅವನಿಗೆ ಸಲಹೆ ಕೊಡುವುದು ಇವನ ಕೆಲಸ. ಕುಮಾರಾಮಾತ್ಯನಿಗೆ ಮೇಲೆ 'ರಾಜಸ್ಥಾನೀಯ'; ಅನಂತರ 'ಪ್ರಮಾತಾರ', 'ದೌಸ್ಸಾಧಸಾಧನಿಕ', 'ಮಹಾರಾಜ', 'ಮಹಾಸಾಮಂತ', 'ಪ್ರತ್ಯಂತ ನೃಪತಿ' ಎಂದು ಮೇಲೆ ಮೇಲೆ ಹೋಗುವ ಅಧಿಕಾರಗಳೇನೆಂಬುದು ಸ್ಪಷ್ಟವಾಗಿಲ್ಲ. ಈ ಎಲ್ಲ ಅಧಿಕಾರಿಗಳ ಮೇಲಿನ ಏಕಮಾತ್ರ ಸರ್ವಾಧಿಕಾರಿಯೇ ಚಕ್ರವರ್ತಿ.

ಪ್ರತಿ 'ವಿಷಯ'ವನ್ನೂ 'ಗ್ರಾಮ'ಗಳಾಗಿ ವಿಭಾಗಿಸುತ್ತಿದ್ದರಷ್ಟೆ. ಪ್ರತಿಗ್ರಾಮದ ಎಂಟೆಂಟು ಕುಲಗಳನ್ನು ನೋಡಿಕೊಳ್ಳುವುದಕ್ಕೆ ಒಬ್ಬ ಅಧಿಕಾರಿಯಿದ್ದನು. ಅವನನ್ನು 'ಅಷ್ಟ ಕುಲಾಧಿಕರಣ' ಎನ್ನುತ್ತಿದ್ದರು. ಅವನಂತೆಯೇ 'ಪಂಚಕುಲಾಧ್ಯಕ್ಷರೂ' ಇದ್ದರು. ಅವರಿಗೆ ಸಹಾಯಕರಾದ ಗ್ರಾಮದ ಹಿರಿಯರನ್ನು 'ಮಹತ್ತರ'ರೆಂದೂ, ಗ್ರಾಮದ ಮುಖಂಡ

ರನ್ನು 'ಗ್ರಾಮಿಕ'ರೆಂದೂ ಕರೆಯುತ್ತಿದ್ದರು. ನ್ಯಾಯಾಧಿಕಾರಿಗಳಿಗೆ 'ದ್ರಾಂಗಿಕ'ರೆಂದು ಹೆಸರಿತ್ತು. ಬಂದು ಹೋಗುವ ಪದಾರ್ಥಗಳ ಮೇಲಿನ ಸುಂಕವನ್ನು ನೋಡಿಕೊಳ್ಳುವವನು 'ಶೌಲ್ಕಿಕ'. ಕಾಡುಗಳ ಅಥವ ದುರ್ಗಗಳ ರಕ್ಷಣೆಗೆ ನಿಯಮಿತನಾದವನು 'ಗೌಲ್ಮಿಕ'. ದೇವ ಬ್ರಾಹ್ಮಣ ರಿಗಾಗಿ ಬಿಟ್ಟುಕೊಟ್ಟ ಅಗ್ರಹಾರಗಳನ್ನು ವಿಚಾರಿಸುವ ಅಧಿಕಾರಿಯು 'ಅಗ್ರಹಾರಿಕ'. ರಾಜ್ಯಕ್ಕೆ ಭೂಮಿಯಿಂದ ಬರಬೇಕಾದ ಆದಾಯಗಳನ್ನು ನೋಡಿಕೊಳ್ಳುತ್ತಿದ್ದವನಿಗೆ 'ಧ್ರುವಾಧಿಕರಣ' ಎಂದು ಹೆಸರು. ರಾಜ್ಯದ ಭಂಡಾರಕ್ಕೆ ಅಧಿಕಾರಿಯು 'ಭಾಂಡಾಗಾರಾಧಿಕೃತ'. 'ತಲವಾಟಕ'ನೆಂಬ ಅಧಿಕಾರಿಯು ಬಹುಶಃ ಈಗಿನ ಶಾನುಭೋಗನಂತಿದ್ದಿರಬಹುದು. 'ಉತ್ಖೇಟಯಿತ'ನೆಂಬವನು ಕರ ಪಡೆಯುವವನು. ಈ ಎಲ್ಲ ಅಧಿ ಕಾರಿಗಳ ಕೆಲಸಕಾರ್ಯಗಳ ಮೇಲ್ವಿಚಾರಣೆಗೆ ಸದ್ವಂಶದಲ್ಲಿ ಜನಿಸಿದ ಕುಲಪುತ್ರರನ್ನು ನಿಯಮಿಸಿ ಅವರನ್ನು 'ಅಧ್ಯಕ್ಷ', 'ಸರ್ವಾಧ್ಯಕ್ಷ' ಎಂದು ಕರೆಯುತ್ತಿದ್ದರು.

ರಾಜ್ಯದಲ್ಲಿ ಆಯಾ ಅಧಿಕಾರಿಗಳು ನಡೆಸಿದ ಕೆಲಸಕರ್ತವ್ಯಗಳಿಗೆ ಸಂಬಂಧಿಸಿದ ಕಾಗದಪತ್ರಗಳನ್ನು ನೋಡಿಕೊಳ್ಳುವುದಕ್ಕಾಗಿಯೇ ಪ್ರತ್ಯೇಕವಾದ ಇಲಾಖೆಯಿತ್ತು. ಆ ಇಲಾಖೆಗೆ 'ಅಕ್ಷಪಟಲ'ವೆಂದು ಹೆಸರು. ಅಲ್ಲಿಯ ಮುಖ್ಯಾಧಿಕಾರಿಯು 'ಮಹಾಕ್ಷಪಟಲಿಕ' ; ಅವನ ಕೈ ಕೆಳಗಿನವರು 'ಅಕ್ಷಪಟಲಿಕ'ರು. ಅಲ್ಲಿಯ ಕಾಗದಪತ್ರಗಳಿಗೆ 'ಕರಣ'ಗಳು ಎನ್ನುತ್ತಿದ್ದರು. ಪ್ರತಿ ಕರಣವನ್ನೂ ಹೀಗೆಯೇ ಬರೆಯಬೇಕೆಂದು ಹೇಳುತ್ತಿದ್ದವನು 'ಶಾಸಯಿತ್ರಿ'. ಅದರಂತೆ ಕರಣವನ್ನು ಬರೆಯುತ್ತಿದ್ದ ವನು 'ಲೇಖಕ', ಅವನನ್ನೇ 'ದಿವಿರ'ಎಂದೂ ಕರೆಯುತ್ತಿದ್ದರು. ಆ ಕರಣಗಳನ್ನು ಜೋಪಾನಮಾಡುತ್ತಿದ್ದವನು 'ಕರಣಿಕ'.

ಹೀಗೆ ನಿಯಮಿತರಾದ ರಾಜ್ಯಾಧಿಕಾರಿಗಳಲ್ಲದೆ, ರಾಜ್ಯದ ಯಾವ ಅಧಿಕಾರದಲ್ಲಿಯೂ ಇರದೆ ಸ್ವತಂತ್ರರಾಗಿದ್ದ ಮಹಾಜನರು ಕೂಡ ರಾಜ್ಯದ ಕಾರ್ಯನಿರ್ವಹಣಕ್ಕೆ ನೆರವಾಗುತ್ತಿದ್ದರು. ನಗರದ ಸರ್ವ ಜನರ ಪ್ರತಿನಿಧಿಯಾದ 'ನಗರಶ್ರೇಷ್ಠಿ' ; ಅಲ್ಲಿಯ ವ್ಯಾಪಾರೀಮಂಡಲದ ಪ್ರತಿನಿಧಿಯಾದ 'ಸಾರ್ಥವಾಹ' ; ಅಲ್ಲಿಯ ಸಮಸ್ತವಾದ ಕಲಾಸಂಘಗಳ

ಪ್ರತಿನಿಧಿಯಾದ 'ಪ್ರಥಮಕುಲಿಕ'; ಕರಣಗಳನ್ನು ಬರೆಯುವ ಲೇಖಕರ ಪರವಾಗಿ ಪ್ರತಿನಿಧಿಯಾದ 'ಪ್ರಥಮಕಾಯಸ್ಥ' ;—ಈ ನಾಲ್ಕು ಜನರ ಸಮಿತಿಯು ಪ್ರತಿ ವಿಷಯಪತಿಗೂ ರಾಜಕಾರ್ಯದಲ್ಲಿ ಸಲಹೆಕೊಟ್ಟು ಸಹಾಯಮಾಡುತ್ತಿತ್ತು.

ಹೀಗೆ ರಾಜ್ಯದ ಸೇವೆಗೇ ಮೀಸಲಾದ ಅಧಿಕಾರಿಗಳಲ್ಲದೆ, ರಾಜಗೃಹದ ಕಾರ್ಯಕ್ಕಾಗಿಯೇ ಬೇರೆ ಕೆಲವರಿದ್ದರು. ಅವರಲ್ಲಿ 'ಪ್ರತೀಹಾರ,' 'ಮಹಾಪ್ರತೀಹಾರ' ಎಂಬವರು, ಅರಮನೆಯ ಬಾಗಿಲನ್ನು ರಕ್ಷಿಸುತ್ತಿದ್ದರು. ಅರಮನೆಗೆ ಯಾರಾದರೂ ದರ್ಶನಾರ್ಥಿಗಳು ಬಂದರೆ, ಅವರ ಬರವನ್ನು ತಿಳಿಸಿ, ಅವರಿಗೆ ದರ್ಶನ ಕೊಡಿಸುವುದು 'ವಿನಯಾಸುರ'ನೆಂಬ ಅಧಿಕಾರಿಯ ಕೆಲಸವಾಗಿತ್ತು. ಅಂತಃಪುರದ ಎಲ್ಲ ಭೃತ್ಯರ ಮೇಲು ವಿಚಾರಣೆಗೆ 'ಸ್ಥಪತಿಸಾಮ್ರಾಟ'ನೆಂಬ ಅಧಿಕಾರಿಯಿದ್ದನು.

ದೊರೆಯು ಆಗಾಗ್ಗೆ ಏನಾದರೂ ಆಜ್ಞೆಮಾಡುತ್ತಿದ್ದನಷ್ಟೆ. ಅದರಲ್ಲಿ ದೊರೆಯು ಪ್ರತ್ಯಕ್ಷವಾಗಿ ಕೊಟ್ಟ ಆಜ್ಞೆಯನ್ನು 'ಸ್ವಮುಖಾಜ್ಞಾ' ಎಂದು ಕರೆಯುತ್ತಿದ್ದರು. ಕೆಲವು ಸಲ ಅದನ್ನು ಬರೆದು ಕಳುಹಿಸುತ್ತಿದ್ದರು ; ಆಗ 'ದೂತ', 'ದೂತಕ', 'ಆಜ್ಞಾದಾಪಕ' ಎಂಬ ಹೆಸರಿನ ಅಧಿಕಾರಿಯು ಆ ಆಜ್ಞೆಯನ್ನು ದೊರೆಯಿಂದ ಕೇಳಿ ತಿಳಿದುಕೊಂಡು, ಅದನ್ನು ತಾಮ್ರದ ತಗಡುಗಳ ಮೇಲೆ ಬರೆಸುತ್ತಿದ್ದನು. ರಾಜನ ಆಜ್ಞೆಯನ್ನು ಇತರರಿಗೆ ತಿಳಿಯಪಡಿಸುವ ಆ ಅಧಿಕಾರವು ಬಹು ಗೌರವದುದಾದ್ದರಿಂದ ಆ ಸ್ಥಾನಕ್ಕೆ ಸಾಮಾನ್ಯರನ್ನು ನೇಮಿಸುತ್ತಿರಲಿಲ್ಲ; ರಾಜಸ್ಥಾನೀಯನಾಗಲಿ ಉಪರಿಕ ಮಹಾರಾಜನಾಗಲಿ ಮಾತ್ರ ದೂತನಾಗಲು ಅರ್ಹರಾಗಿದ್ದರು. ದೊರೆಯ ಆಜ್ಞೆಯನ್ನು ತಾಮ್ರದ ತಗಡುಗಳ ಮೇಲೆ ಕೊರೆಯುತ್ತಿದ್ದವನನ್ನು 'ಸೇಕ್ಯಕಾರ' ಎಂದು ಕರೆಯುತ್ತಿದ್ದರು. ಕೆಲವು ಸಲ ಆ ಆಜ್ಞೆಗಳಿಗೆ ದೊರೆಯು ತಾನೇ ಮುದ್ರೆಯೊತ್ತಿ ಕಳುಹಿಸುತ್ತಿದ್ದನು. ಹಿಂದೆ ಹೇಳಿದ ಬನ್ಸ್ಖೇರಾ ದಾನಶಾಸನದಲ್ಲಿ 'ಸ್ವಹಸ್ತೋ ಮಮ ಮಹಾರಾಜಾಧಿರಾಜ ಶ್ರೀ ಹರ್ಷಸ್ಯ'—ಎಂದರೆ, ಮಹಾರಾಜಾಧಿರಾಜ ಶ್ರೀ ಹರ್ಷನಾದ ನನ್ನ ಕೈಯಿಂದಲೇ—ಎಂದು ರಾಜಮುದ್ರೆಯ ಗುರುತಿದೆ.

ಹರ್ಷನು ತನ್ನ ಯುದ್ಧಯಾತ್ರೆಯನ್ನು ಮುಗಿಸಿದ ಮೇಲೆ ಶತ್ರುಗಳಿಗೆ ಭಯ ಹುಟ್ಟಿಸುವ ಮಹಾಸೇನೆಯನ್ನು ಸಿದ್ಧಮಾಡಿಟ್ಟನು. ಆ ಸೇನೆಯು ಗಡಿನಾಡುಗಳ ರಕ್ಷಣೆಗೆ ನಿಂತು, ಮಲೆತವರನ್ನು ಶಿಕ್ಷಿಸುವುದು; ರಾತ್ರಿವೇಳೆಯಲ್ಲಿ ಅರಮನೆಯನ್ನು ಕಾಯುವುದು. ಸೈನಿಕ ವೃತ್ತಿಯು ವಂಶಪಾರಂಪರ್ಯವಾಗಿ ನಡೆದುಬಂದವರನ್ನೇ ಬಹುವಾಗಿ ಸೇನೆಗೆ ಆರಿಸುತ್ತಿದ್ದರು. ಅದರಿಂದ ಸೇನೆಯ ಯುದ್ಧಕೌಶಲ ಬಹಳ ಉತ್ಕೃಷ್ಟವಾಗಿತ್ತು. ಹುಯೆನ್‌ತ್ಸಾಂಗನು ಹರ್ಷನ ಸೇನೆಯ ಚದುರಂಗವನ್ನು ವರ್ಣಿಸಿರುವನು. ಪ್ರಧಾನ ಸೇನಾಪತಿಯು ಯುದ್ಧಕ್ಕೆ ಆನೆಯ ಮೇಲೆ ಹೋಗುತ್ತಿದ್ದನು. ಆ ಆನೆಗೆ ಲೋಹಕಂಚುಕ ತೊಡಿಸುತ್ತಿದ್ದರು; ಅದರ ಕೊಂಬಿಗೆ ಮೊನಚಾದ ಮುಳ್ಳುಗಳನ್ನು ಸಿಕ್ಕಿಸುತ್ತಿದ್ದರು. ಅದರ ಎರಡು ಪಕ್ಕಗಳಲ್ಲಿ ಇಬ್ಬರು ಸೈನಿಕರು ನಿಂತು ಅದನ್ನು ನಡೆಸುತ್ತಿದ್ದರು. ಪ್ರಧಾನ ಸೇನಾಪತಿಯು ಆಗಾಗ್ಗೆ ರಥವಲ್ಲಿಯೂ ಹೋಗುವನು. ನಾಲ್ಕು ಕುದುರೆ ಕಟ್ಟಿದ ಆ ರಥವನ್ನು ಪದಾತಿ ಸೈನ್ಯವು ಎರಡು ಕಡೆಯೂ ರಕ್ಷಿಸುವುದು. ಅಶ್ವದಳವು ಸೇನೆಯ ಮುಂಭಾಗದಲ್ಲಿ ಹರಡಿಕೊಂಡು, ನುಗ್ಗಿ ಬಂದ ಶತ್ರುಗಳನ್ನು ಎದುರಿಸಿ ತಡೆಯುವುದು. ಒಂದೆಡೆಯಿಂದ ಇನ್ನೊಂದೆಡೆಗೆ ಸುದ್ದಿ ತಲಪಿಸುವುದಕ್ಕೆ ಅಶ್ವದಳ ಬಹು ಅನುಕೂಲವಾಗಿತ್ತು. ಅವರೆಲ್ಲರನ್ನೂ ಪದಾತಿಯು ಮೀರಿಸಿತ್ತು. ಆ ಕಾಲಾಳಿನ ಸೇನೆಯಲ್ಲಿದ್ದವರೆಲ್ಲ ವೀರಾಧಿವೀರರೇ. ಗುರಾಣಿಯನ್ನು ಹಿಡಿದು, ಭರ್ಜಿಯನ್ನೋ ಕತ್ತಿಯನ್ನೋ ಎತ್ತಿ ನುಗ್ಗಿದರೆ, ತಮ್ಮ ಜೀವವಿರುವವರೆಗು ಅವರು ಶತ್ರುಗಳನ್ನು ತರಿದು ಕೆಡಹುತ್ತಿದ್ದರು. ಸೈನಿಕ ವಂಶದಲ್ಲಿ ಜನಿಸಿ ಸಹಜವಾಗಿಯೆ ಯುದ್ಧದಲ್ಲಿ ಕುಶಲಿಗಳಾದ ಅವರು ಯಾವ ಆಯುಧವನ್ನು ಬೇಕಾದರೂ ಹಿಡಿದು ಹೋರಾಡುತ್ತಿದ್ದರು.

ಇಂತಹ ಮಹಾಸೇನೆಯ ಮುಖ್ಯಾಧಿಕಾರಿಗೆ 'ಮಹಾಸೇನಾಪತಿ', 'ಮಹಾಬಲಾಧಿಕೃತ', 'ಮಹಾಬಲಾಧ್ಯಕ್ಷ' ಎಂದು ಹೆಸರು. ಅವನ ಕೆಳಗಿನವನು 'ಸೇನಾಪತಿ', 'ಬಲಾಧಿಕೃತ', 'ಬಲಾಧ್ಯಕ್ಷ'. ಹರ್ಷನ ಸೇನೆಯಲ್ಲಿ, ಪುಲಕೇಶಿಯನ್ನು ನೋಡಿ ಕಟ್ಟಿದ ಅವನ ಗಜಸೇನೆ ಪ್ರಸಿದ್ಧ

ವಲ್ಲವೆ! ಅದರ ವಿಚಾರಣೆಗಾಗಿಯೇ ಅನೇಕ ಅಧಿಕಾರಿಗಳಿದ್ದರು. ಆ ಗಜಸೇನೆಯ ಅಧಿಪತಿಗೆ 'ಕಟುಕ', 'ಅಶೇಷ ಗಜಸಾಧನಾಧಿಕಾರಿ'ಎಂದು ಹೆಸರು. ಆನೆಗೆ ಬೇಕಾದ ಹುಲ್ಲು ನೀರು ತರುವವನು 'ನಾಳಿವಾಹಕ', 'ಘಾಸಿಕ'. ಅದಕ್ಕೆ ಮೈ ತೊಳೆದು ಉಪಚರಿಸುವವನು 'ಹಸ್ತಿಪಾರ್ಶ್ವ ರಕ್ಷೀ'. ಆಗಾಗ್ಗೆ ಗಜಯುದ್ಧದ ಪ್ರದರ್ಶನ ನಡೆಯುತ್ತಿತ್ತು; ಅದಕ್ಕೆ 'ಕರಿಕರ್ಮ'ಎನ್ನುತ್ತಿದ್ದರು. ಕಾಲುದಳ ಕುದುರೆದಳಗಳು ಎರಡಕ್ಕೂ ಅಧಿಪತಿಯಾದವನನ್ನು 'ಭಟಾಶ್ವಪತಿ' ಎನ್ನುತ್ತಿದ್ದರು. ಅಶ್ವದಳದ ಮುಖ್ಯಸ್ಥನಿಗೆ 'ಬೃಹದಶ್ವವಾರ'ನೆಂದೂ, ಕುದುರೆಗೆ ಮೈತೊಳೆದು ಉಪ ಚರಿಸುತ್ತಿದ್ದವನಿಗೆ 'ಅಶ್ವಪಾಲ'ನೆಂದೂ ಹೆಸರಿತ್ತು. ಶಾಂತಿಸಮಯ ದಲ್ಲಿಯೂ ಯುದ್ಧಕಾಲದಲ್ಲಿಯೂ ಹೇಗೆ ಹೇಗೆ ವರ್ತಿಸಬೇಕೆಂಬುದು 'ಸಂಧಿವಿಗ್ರಾಹಿಕ'ನೆಂಬ ಅಧಿಕಾರಿಯ ಕೈಲಿತ್ತು. 'ರಣ ಭಾಂಡಾಗಾರಾ ಧಿಕರಣ'ಎಂಬವನು ಯುದ್ಧಕ್ಕೆ ಬೇಕಾದ ಹಣಕಾಸಿನ ವ್ಯವಸ್ಥೆ ಮಾಡು ತ್ತಿದ್ದನು. ಸೈನಿಕರ ಪಾಳಯಗಳ ಮೇಲುವಿಚಾರಣೆಗೆ 'ಪಾಟಿಪತಿ'ಗಳೆಂಬ ಅಧಿಕಾರಿಗಳಿದ್ದರು.

ರಾಜ್ಯಭಾರದ ಕಾಗದಪತ್ರಗಳನ್ನು ತೀವ್ರವಾಗಿ ತಲಪಿಸುವುದ ಕ್ಕೆ 'ದೀರ್ಘಾಧ್ವಗ'ರೆಂಬವರಿದ್ದರು. ಅವರಿಗೆ ಹೀಗೆ ಅಲ್ಲಿಂದಿಲ್ಲಿಗೆ ಇಲ್ಲಿಂದಲ್ಲಿಗೆ ಹೋಗಿ ಬರುವುದೊಂದೇ ಕೆಲಸ. ಆ ದೀರ್ಘಾಧ್ವಗರು ಎಷ್ಟು ವೇಗವಾಗಿ ಹೋಗಿ ಬರುತ್ತಿದ್ದರೆಂಬುದಕ್ಕೆ, ಅಸ್ಸಾಮಿನಿಂದ ನಾಲಂದಕ್ಕೆ ಕಳುಹಿಸಿದ ಪತ್ರವೊಂದು ಎರಡೇ ದಿನಗಳಲ್ಲಿ ತಲಪಿತೆಂಬುದು ನಾಕು. ಅವರಲ್ಲದೆ, ಎಲ್ಲಕಡೆಯೂ ಸುಳಿದು ಸುದ್ದಿ ತರುವ ಗೂಢಚಾರರೂ ಇದ್ದರು; ಅವರಿಗೆ 'ಸರ್ವಗತ'ರೆಂಬ ಹೆಸರಿತ್ತು.

ನಗರ ರಕ್ಷಣೆಗಾಗಿ, ಈಗಿನ ಪೋಲೀಸಿನವರಂತೆ ಆಗ 'ದಂಡಿಕ,' 'ದಂಡಪಾಶಿಕ'ರೆಂಬವರಿದ್ದರು. ಅವರು ಕಳ್ಳರನ್ನು ಹಿಡಿಯುತ್ತಿದ್ದುದ ರಿಂದ, ಅವರನ್ನು 'ಚೌರೋದ್ಧರಣಿಕ' ಎಂದೂ ಕರೆಯುತ್ತಿದ್ದರು. ತಪ್ಪು ಮಾಡಿದವರಿಗೆ ಶಿಕ್ಷೆ ವಿಧಿಸುತ್ತಿದ್ದ ಅಧಿಕಾರಿಗೆ 'ಮಹಾ ಸರ್ವದಂಡ ನಾಯಕ', 'ಮಹಾದಂಡನಾಯಕ', 'ಸರ್ವದಂಡನಾಯಕ' ಎಂದು ಎರಡು ಮೂರು ಹೆಸರಿತ್ತು. ಜನಗಳ ನೀತಿ ನಡತೆಗಳನ್ನು ನೇರ್ಪಡಿ

ಸುವುದಕ್ಕಾಗಿ 'ವಿನಯ ಸ್ಥಿತಿಸ್ಥಾಪಕ'ನೆಂಬವನಿದ್ದನು. ನಗರ ರಕ್ಷಣೆಗಾಗಿ ಪಹರೆ ಕಾಯುವವರಲ್ಲಿ ಕೆಲವರು ಹೆಂಗಸರೂ ಇದ್ದರು; ಅವರಿಗೆ 'ಯಾಮಚೇಟಿ'ಗಳೆಂದು ಹೆಸರು.

ಮೇಲೆ ಹೇಳಿದ ರಾಜ್ಯಾಧಿಕಾರಿಗಳಿಗೆ ಸಂಬಳ ಕೊಡಬೇಕಷ್ಟೆ. ಅದಕ್ಕೆ ಸಾಕಷ್ಟು ಆದಾಯ ರಾಜ್ಯಕ್ಕೆ ಹೇಗೆ ಬರುತ್ತಿತ್ತು, ನೋಡೋಣ. ಸೈನಿಕರಿಗೆ ಮಾತ್ರ ಸಂಬಳ ಕೊಡುತ್ತಿದ್ದರು. ಮಿಕ್ಕ ಅಧಿಕಾರಿಗಳಿಗೆ ಜೀವನಕ್ಕಾಗಿ ಭೂಮಿಯನ್ನು ಬಿಟ್ಟುಕೊಡುತ್ತಿದ್ದರು; ಅವರು ಯಾವ ಯಾವ ಭಾಗಗಳಲ್ಲಿ ಅಧಿಕಾರ ಮಾಡುತ್ತಿದ್ದರೋ ಆಯಾ ಭಾಗಗಳ ಜನರು ಅವರಿಗೆ ಬೇಕಾದುದನ್ನು ನೀಡುತ್ತಿದ್ದರು. ಹೀಗೆಂದು ಆ ಅಧಿಕಾರಿಗಳು ಅಲ್ಲಿಯ ಜನರನ್ನು ಹಿಂಸಿಸುತ್ತಿರಲಿಲ್ಲ. ಸಮಾಜದ ಶೀಲವನ್ನು ಕೆಡಿಸತಕ್ಕಂತಹ ತಪ್ಪು ಮಾಡಿದವನಿಗೆ ಶಿಕ್ಷೆಯಾಗಿ ಕೈಕಾಲು ಕಡಿಯುತ್ತಿದ್ದರು, ಇಲ್ಲವೆ ಕಾಡಿಗೆ ಅಟ್ಟುತ್ತಿದ್ದರು. ರಾಜದ್ರೋಹಕ್ಕೆ ಬದುಕಿರುವವರೆಗೆ ಕಾರಾಗೃಹವಾಸವೇ ಶಿಕ್ಷೆಯಾಗಿತ್ತು. ಅದರಿಂದ ಅಧಿಕಾರಿಗಳ ನಡತೆ ಚೆನ್ನಾಗಿತ್ತು. ಹೀಗೆ ಆಯಾ ಪ್ರಾಂತ್ಯಗಳ **ವೆಚ್ಚವು** ಅಲ್ಲಲ್ಲಿಯೆ ಹುಟ್ಟಿಹೋಗುತ್ತಿದ್ದುದರಿಂದ, ಜನರು ದೊರೆಗೆ ಕೊಡಬೇಕಾದ ತೆರಿಗೆ ಬಹಳ ಕೊಂಚವಾಗಿತ್ತು. ಏಕೆಂದರೆ ಅಲ್ಲಲ್ಲಿಯ ವೆಚ್ಚ ಅಲ್ಲಲ್ಲಿಯೆ ಕಳೆದು ಹೋಗುತ್ತಿತ್ತಾಗಿ, ದೊರೆಯ ವೆಚ್ಚ ಬಹಳವಾಗುತ್ತಿರಲಿಲ್ಲ.

ಬೆಳೆದುದರಲ್ಲಿ ಆರನೆಯ ಒಂದು ಪಾಲು ರಾಜನಿಗೆ ಸೇರಬೇಕೆಂಬ ಹಳೆಯ ನೀತಿಯನ್ನು ಅನುಸರಿಸಿ ಬರುತ್ತಿದ್ದ ಆದಾಯವೇ ರಾಜ್ಯಾದಾಯದ ಮುಖ್ಯಭಾಗವಾಗಿತ್ತು. ದೊರೆಯು ಅದನ್ನು ನಾಲ್ಕುಭಾಗ ಮಾಡುತ್ತಿದ್ದನು: ಒಂದು ಭಾಗ ರಾಜ್ಯದ ವೆಚ್ಚಕ್ಕೆ, ಪೂಜಾದಿಗಳಿಗೆ; ಒಂದು ಭಾಗ ಸಾರ್ವಜನಿಕ ಸೇವೆ ಮಾಡಿ ಪ್ರಸಿದ್ಧರಾದವರಿಗೆ; ಇನ್ನೊಂದು ಭಾಗ ಮೇಧಾವಿಗಳೆಂದು ವಿಖ್ಯಾತರಾದವರನ್ನು ಗೌರವಿಸುವುದಕ್ಕೆ; ಉಳಿದೊಂದು ಭಾಗ ವಿವಿಧ ಧರ್ಮಾನುಯಾಯಿಗಳಿಗೆ ದಾನ ಕೊಡುವುದಕ್ಕೆ;—ಈ ತೆರನಾಗಿ ಅದು ವಿನಿಯೋಗವಾಗುತ್ತಿತ್ತು.

ಮೇಲೆ ಹೇಳಿದ ಮುಖ್ಯ ಆದಾಯವಲ್ಲದೆ ದೊರೆಗೆ ಬೇರೆ ತೆರಗಳಲ್ಲಿಯೂ ಆದಾಯವಿತ್ತು. ಹರ್ಷನ ಆದಾಯ ಯಾವಯಾವ ಮುಖ

ವಾಗಿ ಬರುತ್ತಿತ್ತೆಂಬುದು ತಿಳಿಯದಿದ್ದರೂ, ಆ ಕಾಲದಲ್ಲಿ ರಾಜಾದಾಯವು ಹೇಗೆ ಹೇಗೆ ಬರುತ್ತಿತ್ತೆಂಬುದನ್ನು ಆಗಿನ ಕೆಲವು ಶಾಸನಗಳಿಂದ ಗ್ರಹಿಸಬಹುದು. ಭೂಕಂದಾಯವಂತೂ ತಿಳಿದೇ ಇದೆ. ತಮ್ಮದಲ್ಲದ ಭೂಮಿಯನ್ನು ಸಾಗುವಳಿ ಮಾಡುವವರು ತಾವೂ ಕರ ಕೊಡಬೇಕಾಗಿತ್ತು. ಆದಾಯವು ಧಾನ್ಯರೂಪದಲ್ಲಿಯೂ ಹಣದರೂಪದಲ್ಲಿಯೂ ಬರುತ್ತಿತ್ತು. ಗುಪ್ತವಾದ ನಿಧಿಗಳು ಯಾರಿಗಾದರೂ ಸಿಕ್ಕಿದರೆ, ಅವರು ಅದನ್ನು ರಾಜ್ಯಕ್ಕೆ ಒಪ್ಪಿಸಬೇಕಾಗಿತ್ತು; ಕೆಲವು ಕಡೆ ಬಲವಂತದಿಂದ ಕೆಲಸ ಮಾಡಿಸುತ್ತಿದ್ದರು; ಅಲ್ಲಿ ಕೊಡಬೇಕಾದ ಕೂಲಿ ಮಿಗುತ್ತಿದ್ದುದರಿಂದ ಅದೂ ಒಂದು ತೆರದ ಆದಾಯವೆಂದು ಗಣಿಸುತ್ತಿದ್ದರು. ಉಪ್ಪಿನ ಮೇಲೆ, ಚರ್ಮದ ಮೇಲೆ, ಕಲ್ಲಿದ್ದಲಿನ ಮೇಲೆ ಸುಂಕವಿತ್ತು. ಗಣಿಗಳನ್ನು ತೋಡಿದರೆ, ರಾಜ್ಯಕ್ಕೆ ಭಾಗ ಕೊಡಬೇಕಾಗಿತ್ತು. ಅಪರಾಧ ಮಾಡಿದವರಿಗೆ ವಿಧಿಸುತ್ತಿದ್ದ ದಂಡದಿಂದಲೂ ಆದಾಯವಾಗುತ್ತಿತ್ತು. ಇನ್ನೂ ಅನೇಕ ರೀತಿಗಳಲ್ಲಿ ಆ ಕಾಲದ ದೊರೆಗಳ ಆದಾಯ ಬರುತ್ತಿತ್ತು.

ಆದರೆ ಹರ್ಷನು ಈ ಎಲ್ಲರೀತಿಗಳಲ್ಲಿ ತನ್ನ ಆದಾಯವನ್ನು ಹೆಚ್ಚಿಸುತ್ತಿದ್ದನೆಂದು ಹೇಳುವಂತಿಲ್ಲ. ಆತನ ವೆಚ್ಚವು ಬಹಳವಾಗಿ ಕಂಡು ಬಂದರು ಕೂಡ, ಅದರ ಭಾರ ಅವನ ಪ್ರಜೆಗಳ ಮೇಲೆ ಬೀಳುತ್ತಿರಲಿಲ್ಲ. ಪ್ರಜೆಗಳು ಕೆಲವು ಕಡೆ ಕರ ಎತ್ತಲು ಬಂದವರನ್ನು ದೂಷಿಸಿ, ದೊರೆಯ ಆಳ್ವಿಕೆಗೆ ಅಸಮಾಧಾನಪಡುತ್ತಿದ್ದರೆಂದು ಬಾಣನು ಒಂದೆರಡು ಕಡೆ ಸೂಚಿಸಿದ್ದಾನೆ. ಆದರೆ ಹಾಗೆ ಅಸಮಾಧಾನಪಡುತ್ತಿದ್ದವರ ಸಂಖ್ಯೆ ಬಹಳ ಸ್ವಲ್ಪವಾಗಿತ್ತು; ಎಷ್ಟು ಮೇಲು ಮಾಡಿದರೂ ಸಮಾಧಾನ ಹೊಂದದವರು ಕೆಲವರು ಲೋಕದಲ್ಲಿ ಎಲ್ಲೆಲ್ಲಿಯೂ ಸಿಕ್ಕುತ್ತಾರೆ, ಅದು ಕೆಲವರ ಸ್ವಭಾವ. ಹರ್ಷನ ರಾಜ್ಯದಲ್ಲಿ ಪ್ರಜೆಗಳು ತೃಪ್ತರಾಗಿದ್ದರು, ಸುಖಿಗಳಾಗಿದ್ದರು ಎಂಬುದಕ್ಕೆ ಆ ರಾಜ್ಯವನ್ನು ಕಣ್ಣಾರೆ ಕಂಡುಹೋದ ಹುಯೆನ್‌ತ್ಸಾಂಗನೇ ಸಾಕ್ಷಿ. ಹರ್ಷನ ರಾಜ್ಯಭಾರವನ್ನು ಕುರಿತು ಅವನು ಹೀಗೆ ಹೇಳಿದ್ದಾನೆ: ''ಇಲ್ಲಿಯ ಜನರು ಸ್ವಭಾವವಾಗಿ ಚಂಚಲರಾದರೂ ಅವರ ಶೀಲ ಶುದ್ಧವಾದುದು. ತಮ್ಮದಲ್ಲದುದನ್ನು ಅವರು ಮುಟ್ಟರು; ತಾವು ಕೊಡಬೇಕಾದುದಕ್ಕಿಂತ ಹೆಚ್ಚಾಗಿಯೇ ಕೊಡುವರು. ಅವರು

ಪರಲೋಕದಲ್ಲಿ ನಂಬಿ, ಹೆದರಿ, ಪಾಪಮಾಡರು. ಅವರು ಮೋಸಮಾಡುವುದಿಲ್ಲ, ಕೊಟ್ಟ ಮಾತು ತಪ್ಪುವುದಿಲ್ಲ.. ಅಧಿಕಾರಿಗಳು ಸತ್ಯಸಂಧರಾಗಿ ನಡೆಯುವರು ; ಜನರೆಲ್ಲರೂ ಸೋದರರಂತೆ ವಾಸಿಸುವರು , ಅದರಿಂದ ಕಳ್ಳಕಾಕರ ಕಾಟವೇನೂ ಬಹಳವಾಗಿಲ್ಲ. ಅಧಿಕಾರಿಗಳ ಆವಶ್ಯಕತೆಗಳು ಸ್ವಲ್ಪವೆ. ಜನರನ್ನು ಬಲವಂತಪಡಿಸಿ ಕೆಲಸಮಾಡಿಸುವುದಿಲ್ಲ. ಕೊಡಬೇಕಾದ ಕರ ಕೊಂಚವೆ. ಅದರಿಂದ ಜನರು ತಮ್ಮ ತಮ್ಮ ವೃತ್ತಿಗಳನ್ನು ಬಿಡದೆ ಹಾಯಾಗಿರುವರು.''

---

# ಶೀಲಾದಿತ್ಯ ಹರ್ಷವರ್ಧನ

## ದಿಗ್ವಿಜಯ ಮುಗಿದ ಮೇಲೆ

ಅಣ್ಣನ ವಧೆಗೆ ಪ್ರತೀಕಾರಮಾಡಬೇಕೆಂದು ಎದ್ದ ಹರ್ಷನ ಮನಸ್ಸಿನಲ್ಲಿ ಸೇನಾಪತಿ ಸಿಂಹನಾದನು ದಿಗ್ವಿಜಯದ ಬೀಜ ನೆಟ್ಟನು. ಹರ್ಷನು ದಿಗ್ವಿಜಯಕ್ಕೆ ಹೊರಟಿರುವಾಗ, ವಿಂಧ್ಯಾರಣ್ಯದಲ್ಲಿ ರಾಜ್ಯಶ್ರೀ ಅಲೆಯುತ್ತಿರುವ ಸುದ್ದಿ ಬಂತು. ಹರ್ಷನು ತನ್ನ ಯಾತ್ರೆಯನ್ನು ನಿಲ್ಲಿಸಿ ರಾಜ್ಯಶ್ರೀಯನ್ನು ಹುಡುಕುತ್ತ ವಿಂಧ್ಯದ ಕಾಡಿಗೆ ನಡೆದನು; ದಿವಾಕರ ಮಿತ್ರನೆಂಬ ಬೌದ್ಧ ಸಂನ್ಯಾಸಿಯ ಸಹಾಯ ಪಡೆದು ರಾಜ್ಯಶ್ರೀಯನ್ನು ಅಗ್ನಿಮುಖದಿಂದ ಬದುಕಿಸಿಕೊಂಡನು. ಮಧ್ಯೆ ಮುರಿದು ಬಿಟ್ಟುಬಂದ ತನ್ನ ದಿಗ್ವಿಜಯವನ್ನು ಮುಗಿಸಿ ಬಂದು, ತನ್ನ ತಂಗಿಯೊಡನೆ ತಾನೂ ಬೌದ್ಧಧರ್ಮವನ್ನು ಸ್ವೀಕರಿಸುವೆನೆಂದು ಹರ್ಷನು ಮಾತುಕೊಟ್ಟನು. ಕೈಕೊಂಡ ದಿಗ್ವಿಜಯದಲ್ಲಿ ತಕ್ಕಮಟ್ಟಿಗೆ ಕೃತಕೃತ್ಯನಾಗಿ, ಆರು ವರುಷದ ಕಾದಾಟ ಮುಗಿದ ಮೇಲೆ, ರಾಜ್ಯವನ್ನು ಆದಷ್ಟು ವಿಸ್ತರಪಡಿಸಿದನಂತರ, ಸೈನ್ಯವನ್ನು ದೊಡ್ಡದು ಮಾಡಿದ ಬಳಿಕ, ಹರ್ಷನು ತನ್ನ ತಂಗಿಯೊಡನೆ ಬೌದ್ಧಧರ್ಮವನ್ನು ಸ್ವೀಕರಿಸಿದನು.

ಅಂದಿನಿಂದ ಅವನು ಯುದ್ಧದ ಗೋಜಿಗೆ ಹೋಗಲಿಲ್ಲ. ಮೊದಲು ಯುದ್ಧದಲ್ಲಿ ಯಾವ ಆಸಕ್ತಿ ಶ್ರದ್ಧೆಗಳನ್ನು ತೋರಿಸುತ್ತಿದ್ದನೋ, ಅದೇ ಆಸಕ್ತಿ ಶ್ರದ್ಧೆಗಳನ್ನು ಧರ್ಮದಲ್ಲಿ ತೋರಿಸಲು ತೊಡಗಿದನು. ಹುಯೆನ್ ತ್ಸಾಂಗನೂ ಅವನ ಶಿಷ್ಯನಾದ ಹುಯಿಲಿಯೂ ಹರ್ಷನ ದಿಗ್ವಿಜಯ ಮುಗಿದ ಮೇಲಿನ ಕತೆಯನ್ನು ಹೀಗೆ ಹೇಳಿರುವರು:

''ಅನಂತರ ಅವನ ಭುಜಗಳಿಗೆ ವಿರಾಮ ದೊರೆತು, ಆತನು ಮೂವತ್ತು ವರ್ಷ ಶಾಂತಿಯಿಂದ ರಾಜ್ಯವಾಳಿದನು. ಊಟನಿದ್ರೆಗಳನ್ನೂ

ಮರಿತು ಧರ್ಮದಿಂದ ಲಭಿಸುವ ಪುಣ್ಯವನ್ನು ಸಂಪಾದಿಸಲು ಯತ್ನಿಸಿದನು. ಮಾಂಸಕ್ಕಾಗಿ ಯಾವ ಪ್ರಾಣಿಯನ್ನೂ ಕೊಲ್ಲಕೂಡದೆಂದು ಶಾಸನಮಾಡಿ, ಕೊಂದರೆ ತಲೆದಂಡವೆಂದು ವಿಧಿಸಿದನು. ನಗರಗಳಲ್ಲೂ ಗ್ರಾಮಗಳಲ್ಲೂ ಅನೇಕ ಪುಣ್ಯಶಾಲೆಗಳನ್ನು ಕಟ್ಟಿಸಿ, ಹಸಿವು ದಾಹ ನೀಗುವುದಕ್ಕೆ ಬೇಕಾದುದನ್ನು ಒದಗಿಸಿದನು. ಪ್ರಯಾಣಿಕರ ಮತ್ತು ಬಡಜನರ ಸಹಾಯಾರ್ಥವಾಗಿ ವೈದ್ಯರನ್ನು ಅಲ್ಲಿ ನಿಲ್ಲಿಸಿ ಬೇಕಾದ ಔಷಧಗಳಿಗೆ ಕೊರತೆ ಬಾರದಂತೆ ನೋಡಿಕೊಂಡನು.

''ಬುದ್ಧನ ಪಾದ ತಗಲಿ ಪವಿತ್ರವಾದ ಕ್ಷೇತ್ರಗಳಲ್ಲೆಲ್ಲ ಬೌದ್ಧ ಸಂನ್ಯಾಸಿಗಳು ತಂಗಲು ಅನುಕೂಲವಾದ 'ಸಂಘಾರಾಮ'ಗಳೆಂಬ ಮಂದಿರಗಳನ್ನು ಕಟ್ಟಿಸಿದನು. ಆತನ ರಾಜಧಾನಿಯಾದ ಕನ್ಯಾಕುಬ್ಜದಲ್ಲಿಯೇ ಸುಮಾರು ನೂರು ಸಂಘಾರಾಮಗಳಿದ್ದುವು. ಹರ್ಷನು ಗಂಗಾತೀರದಲ್ಲಿ ಸಾವಿರಾರು ಸ್ತೂಪಗಳನ್ನು ಕಟ್ಟಿಸಿದನು; ಒಂದೊಂದು ಸ್ತೂಪವೂ ನೂರು ನೂರು ಅಡಿ ಎತ್ತರದ್ದು.

''ಅವನು ಐದು ವರುಷಕ್ಕೊಮ್ಮೆ 'ಮೋಕ್ಷ ಪರಿಷತ್ತೆ'ಂಬ ಸಭೆಯನ್ನು ಕೂಡಿಸುವನು. ಆ ಸಮಯದಲ್ಲಿ, ಸೈನಿಕರ ಅಸ್ತ್ರಗಳು ಹೊರತಾಗಿ ಮಿಕ್ಕ ತನ್ನ ಸರ್ವಸ್ವವನ್ನೂ ದಾನಮಾಡುವನು. ಪ್ರತಿ ವರುಷವೂ ಆತನು ದೇಶದೇಶದಿಂದ ಬೌದ್ಧ ಸಂನ್ಯಾಸಿಗಳನ್ನು ಬರಮಾಡಿಕೊಳ್ಳುವನು. ಅವರು ಬಂದ ಮೂರನೆಯ ಮತ್ತು ಏಳನೆಯ ದಿವಸ, ಅವರಿಗೆ ಬೇಕಾದುದನ್ನು ದಾನಕೊಡುವನು. ಆ ಕಾಲದಲ್ಲಿ ಧರ್ಮಸಿಂಹಾಸನವನ್ನು ಸಜ್ಜುಗೊಳಿಸಿ ಸಭೆಗಳನ್ನು ಸೇರಿಸುವನು. ಭಿಕ್ಷುಗಳು ಧರ್ಮವನ್ನು ಕುರಿತು ವಾದ ನಡೆಸಬೇಕೆಂದು ಅಪೇಕ್ಷಿಸಿ, ಅವರವಾದ ವಿವಾದಗಳ ಬಲಾಬಲಗಳನ್ನು ತಾನೇ ನಿರ್ಣಯಿಸುವನು. ಸತ್ವಶಾಲಿಗಳನ್ನು ಗೌರವಿಸಿ ಮಾನಿಸುವನು; ಸತ್ವಹೀನರು ಪದಚ್ಯುತರಾಗುವರು. ಭಿಕ್ಷುಗಳಲ್ಲಿ ಯಾರಾದರೂ ಶೀಲವಂತನಾಗಿ ಪ್ರಜ್ಞಾವಂತನೆಂದು ಕಂಡುಬಂದರೆ, ತಾನೇ ಅವನನ್ನು ಸಿಂಹಾಸನದ ಮೇಲೆ ಕುಳ್ಳಿರಿಸಿ ಅವನಿಗೆ ಶರಣಾಗುವನು. ಶೀಲಗಳನ್ನು ನಡೆಸಿಕೊಂಡುಬಂದಿದ್ದರೂ ಪ್ರಜ್ಞೆ ಸಾಲದೆಂದು ತೋರಿದರೆ, ಅಂತಹ ಭಿಕ್ಷುವನ್ನು ಗೌರವಿಸುವನು; ಆದರೆ

ಬಹುಮಾನಿಸುವುದಿಲ್ಲ. ಶೀಲಗಳನ್ನೂ ನಡೆಸದೆ ಅಧರ್ಮಿಯಾಗಿರುವನೆಂದು ತಿಳಿದರೆ, ಅಂತಹವನನ್ನು ದೇಶದಿಂದ ಓಡಿಸಿಬಿಡುವನು; ಪುನಃ ಅವನನ್ನು ಕಾಣುವುದೂ ಇಲ್ಲ, ಕೇಳುವುದೂ ಇಲ್ಲ.

"ಅಕ್ಕಪಕ್ಕದ ಯಾವನಾದರೂ ರಾಜನೋ ಮಂತ್ರಿಯೋ ಶ್ರದ್ಧೆಯಿಂದ ಧರ್ಮಾನುಸಾರವಾಗಿ ನಡೆಯುತ್ತಿದ್ದುದು ತಿಳಿದುಬಂದರೆ, ಅಂತಹವನನ್ನು ಕೈಹಿಡಿದು ಕರೆದುಕೊಂಡು ತನ್ನೊಡನೆ ಕುಳ್ಳಿರಿಸಿಕೊಳ್ಳುವನು; ಅವನನ್ನು ಪರಮಮಿತ್ರನೆಂದು ಸಂಬೋಧಿಸುವನು. ಆ ರೀತಿಯ ನಡತೆಯಿಲ್ಲದವರನ್ನು ತಿರಸ್ಕರಿಸುವನು.

"ಅವನು ಪ್ರಯಾಣಮಾಡುವಾಗ, ತಂಗಿದ ಸ್ಥಳಗಳಲ್ಲಿ ಎಲ್ಲ ಧರ್ಮಗಳ ಜನರಿಗೂ ಭೋಜನ ನೀಡುತ್ತಿದ್ದನು; ಅವರಲ್ಲಿ ಬೌದ್ಧರು ಸುಮಾರು ಸಾವಿರವೂ, ಬ್ರಾಹ್ಮಣರು ಸುಮಾರು ಐನೂರೂ ಇರುವರು."

ಅದೇ ಹುಯೆನ್‌ತ್ಸಾಂಗನು ಪುನಃ ಹರ್ಷನನ್ನು ಕುರಿತು, "ಅವನು ಪ್ರತಿ ದಿವಸವನ್ನೂ ಮೂರು ಭಾಗ ಮಾಡುವನು. ಮೊದಲನೆಯ ಭಾಗದಲ್ಲಿ ರಾಜ್ಯದ ಆಡಳಿತವನ್ನು ನಡೆಸುವನು. ಎರಡನೆಯದನ್ನು ಧರ್ಮಕಾರ್ಯಗಳಿಗೆ ವಿನಿಯೋಗಿಸುವನು. ಕೆಲಸ ಮಾಡುವುದಕ್ಕೆ ಕಾಲ ಸಾಕಾಗದೆಂಬಂತೆ ಎಡೆಬಿಡದೆ ಕೆಲಸಮಾಡುವನು" ಎಂದು ಹೇಳಿದ್ದಾನೆ. ಹರ್ಷನ ರಾಜ್ಯಭಾರವನ್ನು ಹಿಂದಿನ ಅಧ್ಯಾಯದ ಕಡೆಯಲ್ಲಿ ಕೇಡುದಾಯಿತು. ಆತನು ಪುಣ್ಯಗಳಿಸುವ ಧರ್ಮಕಾರ್ಯಗಳನ್ನು ಹೇಗೆ ನಡೆಸುತ್ತಿದ್ದನೆಂಬುದನ್ನು ಮುಂದೆ ಕಾಣೋಣ.

## ಹುಯೆನ್‌ತ್ಸಾಂಗನೂ ಭಾಸ್ಕರವರ್ಮನೂ

ಹುಯೆನ್‌ತ್ಸಾಂಗನು ಬೌದ್ಧಧರ್ಮವನ್ನು ತಿಳಿದುಕೊಂಡು ಹೋಗುವುದಕ್ಕಾಗಿ ಹಿಂದೂದೇಶಕ್ಕೆ ಬಂದವನು. ಅದಕ್ಕಾಗಿ ಬೌದ್ಧರಿರುವ ಸ್ಥಳಗಳಿಗೆಲ್ಲ ಹೋಗಿ ಹಿಂದೂದೇಶದ ಉದ್ದಗಲಗಳನ್ನು ಬಳಸುವಾಗ ಹಾಗೆಯೇ ಹರ್ಷನ ರಾಜ್ಯಕ್ಕೂ ಬಂದನು. ಆ ಕಾಲದಲ್ಲಿ ಚಕ್ರವರ್ತಿಯು ರಾಜಧಾನಿಯಲ್ಲಿರಲಿಲ್ಲ; ರಾಜ್ಯದ ಬೇರೆ ಭಾಗಗಳಲ್ಲಿ ಸಂಚಾರ ಮಾಡುತ್ತಿದ್ದನು. ಹುಯೆನ್‌ತ್ಸಾಂಗನು ತನ್ನ ಸಂಚಾರವನ್ನು ಮುಂದುವರಿಸುತ್ತ

ನಾಲಂದವೆಂದು ಪ್ರಸಿದ್ಧವಾದ ಆ ಕಾಲದ ವಿದ್ಯಾಪೀಠಕ್ಕೆ ಬರುವ ವೇಳೆಗೆ, ಹರ್ಷನು ಒರಿಸ್ಸದ ಕೊಂಗ್ಯೋಧದಲ್ಲಿ ಯುದ್ಧವನ್ನು ಮುಗಿಸಿ ಹಿಂದಿರುಗುವುದರಲ್ಲಿದ್ದನು.

ಆ ಕಾಲದಲ್ಲಿ, ಬೌದ್ಧರಲ್ಲಿ ಮುಖ್ಯವಾಗಿ ಎರಡು ಪಂಗಡಗಳಿದ್ದುವು: ಒಂದು ಹೀನಯಾನ, ಇನ್ನೊಂದು ಮಹಾಯಾನ. ಹೀನಯಾನದವರಿಗೂ ಮಹಾಯಾನದವರಿಗೂ ಅಷ್ಟೇನೂ ಸೌಹಾರ್ದವಿರಲಿಲ್ಲ. ಹರ್ಷನು ಮಹಾಯಾನಕ್ಕೆ ಸೇರಿದವನು. ಕೆಲವರು ಹೀನಯಾನದವರು ಅವನ ಬಳಿ ಬಂದು "ದೊರೆಯೆ! ನಾಲಂದ ವಿಹಾರದ ಒಂದು ಭಾಗವನ್ನು ನೀನು ಕಟ್ಟಿಸಿಕೊಟ್ಟೆಯಂತೆ. ಕಾಪಾಲಿಕರಿಗೂ ಯಾವುದಾದರೂ ಕಟ್ಟಡವನ್ನು ಕಟ್ಟಿಸಿಕೊಡಬಾರದೆ?" ಎಂದರು.

ಅವರ ಮಾತು ಪೂರ್ಣವಾಗಿ ಅರ್ಥವಾಗದೆ, ಹರ್ಷನು "ಏನಿದು ನಿಮ್ಮ ಆಕ್ಷೇಪ?" ಎಂದನು.

ಅದಕ್ಕೆ ಅವರು "ನಾಲಂದದ ಮಹಾಯಾನದವರೂ ಕಾಪಾಲಿಕರೂ ಬೋಧಿಸುವುದು ಒಂದೇ ಧರ್ಮ!" ಎಂದರು.

ಅದಕ್ಕೆ ದೊರೆ "ನೀವು ಮಹಾಯಾನದವರನ್ನು ಕಂಡಿಲ್ಲ, ಅದಕ್ಕೇ ಈ ಮೌಢ್ಯ!" ಎಂದನು.

"ನಮ್ಮ ಮಾತಿನಲ್ಲಿ ಅರಸನಿಗೆ ನಂಬಿಕೆಯಿಲ್ಲದೆ ಹೋದರೆ, ವಾದ ಮಾಡಲು ಮಹಾಯಾನದವರನ್ನು ಕರೆಸಬಾರದೇಕೆ!" ಎಂದ ಆ ಹೀನಯಾನದವರ ಮಾತಿಗೆ ದೊರೆ ಒಪ್ಪಿದನು. ಒಪ್ಪಿ, ಅಲ್ಲಿ ನಡೆದುದನ್ನೆಲ್ಲ ಸಾಂಗವಾಗಿ ಬರೆದು, ವಾದಕ್ಕೆ ನಾಲ್ಕು ಜನ ಭಿಕ್ಷುಗಳನ್ನು ಕಳುಹಿಸಿಕೊಡಬೇಕೆಂದು ಪ್ರಾರ್ಥಿಸಿ ನಾಲಂದಕ್ಕೆ ಓಲೆಯಟ್ಟಿದನು.

ಆ ಕಾಲದಲ್ಲಿಯೇ ಹುಯೆನ್‌ತ್ಸಾಂಗನು ನಾಲಂದದಲ್ಲಿ ತಂಗಿದ್ದುದು. ಆಗ ನಾಲಂದದ 'ಸ್ಥವಿರ' ಎಂದರೆ ಮುಖ್ಯಸ್ಥನಾದ ಶೀಲಭದ್ರನು ಅರಸನ ಕಾಗದವನ್ನು ನೋಡಿದನು. ಅದರಂತೆ ಹೀನಯಾನದವರೊಡನೆ ವಾದಮಾಡಲು ನಾಲ್ಕು ಜನರನ್ನು ನೋಡಿ ಆರಿಸಿದನು; ಆ ನಾಲ್ಕು ಜನರಲ್ಲಿ ಹುಯೆನ್‌ತ್ಸಾಂಗನೂ ಒಬ್ಬನಾದನು.

ಆದರೆ ಅವರು ನಾಲಂದದಿಂದ ಹೊರಡುವ ವೇಳೆಗೆ "ನನ್ನ ಪ್ರಾರ್ಥನೆಯನ್ನು ಈಗಲೇ ನಡೆಸಿಕೊಡಬೇಕೆಂಬ ಅವಸರವೇನೂ ಇಲ್ಲ; ಕೊಂಚ ತಡೆದು ಬರಬಹುದು" ಎಂದು ಅರಸನಿಂದ ಪುನಃ ಕಾಗದ ಬಂತು ; ಅರಸನು ಬೇರೆ ಕಡೆ ಪ್ರಯಾಣ ಹೊರಟಿದ್ದನು. ಹೊರಡಲು ನಿಂತಿದ್ದ ನಾಲ್ವರು ಭಿಕ್ಷುಗಳು ನಾಲಂದದಲ್ಲಿಯೇ ನಿಂತರು.

ಆ ವೇಳೆಗೆ ಕಾಮರೂಪದೇಶದಿಂದ ಬಂದ ಬ್ರಾಹ್ಮಣನೊಬ್ಬನು "ನನ್ನನ್ನು ವಾದದಲ್ಲಿ ಸೋಲಿಸಿದವರಿಗೆ ನನ್ನ ತಲೆ ದಂಡಕೊಡುತ್ತೇನೆ" ಎಂದು ಎಲ್ಲರನ್ನೂ ಕರೆಯುತ್ತಿದ್ದನು. ಅವನೊಡನೆ ವಾದ ನಡೆಸಲು ಎಲ್ಲರೂ ಹಿಂದೆಗೆದರು. ಆದರೆ ಹುಯೆನ್‌ತ್ಸಾಂಗನು ಅವನ ಕರೆಗೆ ಒಪ್ಪಿದನು ; ಆ ಬ್ರಾಹ್ಮಣನನ್ನು ಲೀಲಾಜಾಲವಾಗಿ ಸೋಲಿಸಿದನು. ಆ ಬ್ರಾಹ್ಮಣ ಕೂಡ ತನ್ನ ಸೋಲನ್ನು ಒಪ್ಪಿಕೊಂಡು, ತನ್ನ ಮಾತಿನಂತೆ ತಲೆ ತೆರಲು ಸಿದ್ಧನಾಗಿದ್ದನು. ಹುಯೆನ್‌ತ್ಸಾಂಗನು ಬೌದ್ಧಧರ್ಮದಲ್ಲಿ ಜೀವಹತ್ಯೆಯಿಲ್ಲವೆಂದು ತಿಳಿಸಿ, ಅವನನ್ನು ಮನ್ನಿಸಿದನು. ಆ ಬ್ರಾಹ್ಮಣನು ತನ್ನ ಜೀವದಾನಕ್ಕೆ ಹುಯೆನ್‌ತ್ಸಾಂಗನಿಗೆ ಕೃತಜ್ಞನಾಗಿ, ತನ್ನ ದೇಶಕ್ಕೆ ಹಿಂದಿರುಗಿದನು.

ಕಾಮರೂಪಕ್ಕೆ ಹಿಂದಿರುಗಿದ ಆ ಬ್ರಾಹ್ಮಣನು ತನ್ನನ್ನು ವಾದದಲ್ಲಿ ಸೋಲಿಸಿದ ಹುಯೆನ್‌ತ್ಸಾಂಗನನ್ನು ತನ್ನ ದೊರೆಯೆದುರು ಬಾಯಿತುಂಬ ಹೊಗಳಿ ಹಾಡಿದನು. ಕಾಮರೂಪದ ದೊರೆಯಾದ ಭಾಸ್ಕರವರ್ಮನು ಬ್ರಾಹ್ಮಣನಾದರೂ, ಅವನಿಗೆ ಬೌದ್ಧಧರ್ಮದಲ್ಲಿ ಶ್ರದ್ಧೆಯಿಲ್ಲದಿದ್ದರೂ, ವಿದ್ಯಾವಂತರಾದವರು ಯಾರಾದರೂ ಅವರನ್ನು ಅವನು ಗೌರವಿಸುತ್ತಿದ್ದನು. ಹುಯೆನ್‌ತ್ಸಾಂಗನ ಗುಣಕಥನವನ್ನು ಕೇಳಿ, ಅವನನ್ನು ಕಾಣಬೇಕೆಂದು ಭಾಸ್ಕರವರ್ಮನಿಗೆ ಕುತೂಹಲ ಹುಟ್ಟಿತು; ಹುಯೆನ್‌ತ್ಸಾಂಗನು ತನ್ನ ದೇಶಕ್ಕೆ ಬರಬೇಕೆಂಬ ಅರ್ಥದ ಪ್ರಾರ್ಥನಾಪತ್ರವನ್ನು ಆಕ್ಷಣವೇ ನಾಲಂದಕ್ಕೆ ಕಳುಹಿಸಿಕೊಟ್ಟನು.

ನಾಲಂದದ ಶೀಲಭದ್ರನು ಆ ಕಾಗದ ಕಂಡು "ಈಗ ಭಾಸ್ಕರವರ್ಮನು ಹುಯೆನ್‌ತ್ಸಾಂಗನನ್ನು ಕರೆಕಳುಹಿದ್ದಾನೆ. ಆದರೆ ಹೀನ

ಯಾನದವರೊಡನೆ ವಾದಮಾಡುವುದಕ್ಕೋಸ್ಕರ ಅವನನ್ನು ಕಳುಹಿಸುವುದಾಗಿ ಹರ್ಷನಿಗೆ ತಿಳಿಸಿದ್ದೇವೆ. ಇವನನ್ನು ಕಾಮರೂಪಕ್ಕೆ ಕಳುಹಿಸಿದರೆ, ಹರ್ಷನಿಗೆ ಕೊಟ್ಟ ಮಾತು ನಡೆಸುವುದು ಹೇಗೆ? '' ಎಂದು ಚಿಂತಿಸಿ, ಭಿಕ್ಷುಗಳ ಸಭೆ ಸೇರಿಸಿದನು. ಹುಯೆನ್‌ತ್ಸಾಂಗನು ಕಾಮರೂಪಕ್ಕೆ ಹೋಗತಕ್ಕುದಲ್ಲವೆಂದು ತೀರ್ಮಾನವಾಯಿತು. ಶೀಲಭದ್ರನು ''ಹುಯೆನ್‌ತ್ಸಾಂಗನು ಚೀನಾದೇಶಕ್ಕೆ ಹೋಗಲು ಆತುರಪಡುತ್ತಿದ್ದಾನೆ. ಅದರಿಂದ ಕಾಮರೂಪಕ್ಕೆ ಬರಲು ಶಕ್ತನಲ್ಲ'' ಎಂದು ದೂತನ ಬಳಿ ಹೇಳಿ ಕಳುಹಿಸಿದನು. ಆ ಮಾತು ನಿಜವಾಗಿತ್ತು; ಚೀನಕ್ಕೆ ಹಿಂದಿರುಗಲು ಹುಯೆನ್‌ತ್ಸಾಂಗನು ಇದಕ್ಕೆ ಮೊದಲೇ ಆತುರ ಪಡುತ್ತಿದ್ದನಾದರೂ ನಾಲಂದದವರು ಅವನನ್ನು ಹೋಗಗೊಟ್ಟಿರಲಿಲ್ಲ.

ಭಾಸ್ಕರವರ್ಮನು ಪುನಃ ದೂತನನ್ನು ಕಳುಹಿಸಿ '' ಹುಯೆನ್‌ತ್ಸಾಂಗನಿಗೆ ಹಿಂದಿರುಗಲು ಆತುರವಾದರೂ, ಕೊಂಚ ಕಾಲವಾದರೂ ಇಲ್ಲಿ ಬಂದಿರಲಿ. ಅವನ ಚೀನದ ಪ್ರಯಾಣಕ್ಕೆ ಏನೂ ತೊಂದರೆಯಾಗುವುದಿಲ್ಲ. ಕೃಪೆಮಾಡಿ ಈ ಪ್ರಾರ್ಥನೆಯನ್ನು ನಡೆಸಿಕೊಡಬೇಕು'' ಎಂದು ಎರಡನೆಯ ಸಲ ಬೇಡಿದನು. ಆಗಲೂ ಹುಯೆನ್‌ತ್ಸಾಂಗನನ್ನು ಕಳುಹಿಸಿಕೊಡಲು ಶೀಲಭದ್ರನು ಒಪ್ಪಲಿಲ್ಲ.

ಭಾಸ್ಕರವರ್ಮನಿಗೆ ಅದು ಕಂಡು ಸೈರಿಸಲಾಗಲಿಲ್ಲ. ಮತ್ತೊಮ್ಮೆ ಮೂರನೆಯ ಸಲ ದೂತನನ್ನು ಕಳುಹಿ, ಶೀಲಭದ್ರನಿಗೆ ಈ ರೀತಿ ಕಾಗದ ಬರೆದನು: '' ನಿಮ್ಮ ಸೇವಕನು ಇದುವರೆಗೆ ಐಹಿಕ ಸುಖಗಳಲ್ಲಿ ಓಲಾಡಿ, ಬುದ್ಧನ ಧರ್ಮದ ಪ್ರಭಾವವನ್ನು ತಿಳಿಯದವನು. ಈಗ, ಪರದೇಶದಿಂದ ಬಂದಿರುವ ಒಬ್ಬ ಬೌದ್ಧ ಸಂನ್ಯಾಸಿಯ ಹೆಸರು ಕೇಳಿ ನನ್ನ ದೇಹಕ್ಕೂ ಆತ್ಮಕ್ಕೂ ಸಂತೋಷವಾಯಿತು; ಧರ್ಮಾಭಿಮಾನವು ನನ್ನಲ್ಲಿ ಅಂಕುರವಾಯಿತು. ಆದರೆ ನೀವು, ನಾನೆಷ್ಟು ಬಗೆಯಿಂದ ಪ್ರಾರ್ಥಿಸಿದರೂ ಪುನಃ ಪುನಃ ನನ್ನ ಪ್ರಾರ್ಥನೆಯನ್ನು ನಿರಾಕರಿಸಿರುವಿರಿ; ಲೋಕವು ಇನ್ನೂ ಅಜ್ಞಾನದಲ್ಲಿಯೇ ಮುಳುಗಿರಲಿ ಎಂದು ಮನಸ್ಸಿರುವಂತೆ, ಆತನನ್ನು ಕಳುಹಲು ಒಪ್ಪದಿರುವಿರಿ. ಬುದ್ಧನ ಮುಕ್ತಿಮಾರ್ಗವಾದ ಧರ್ಮವನ್ನು

ನೀವು ಮುಂದುವರಿಸುವುದು ಹೀಗೆಯೇನು? ಚೀನದಿಂದ ಬಂದಿರುವ ಆ ಸಂನ್ಯಾಸಿಯನ್ನು ಕಂಡು ಪೂಜಿಸಬೇಕೆಂಬ ಬಯಕೆಯಿಂದ ನಾನು ಪುನಃ ದೂತನನ್ನು ಅಟ್ಟಿದ್ದೇನೆ. ಆದರೆ, ಈ ಸಲ ಆ ಭಿಕ್ಷು ಬಾರದಿದ್ದರೆ, ನನ್ನ ದೌಷ್ಟ್ಯಕ್ಕೆ ತಡೆಯಿಲ್ಲದಂತಾಗುವುದು. ಮೊನ್ನೆ ಮೊನ್ನೆ ತಾನೆ ಶಶಾಂಕರಾಜನು ಬೌದ್ಧಧರ್ಮವನ್ನು ಕೆಡಿಸಿ, ಬೋಧಿವೃಕ್ಷವನ್ನು ನಿರ್ಮೂಲಮಾಡಿದುದು ನಿಮಗೆ ನೆನಪಿರಬಹುದು. ಅವನು ಮಾಡಿದುದನ್ನು ನಾನು ಮಾಡಲಾರೆನೆಂದು ತಿಳಿದಿರುವಿರಾ? ಅವಶ್ಯವೆಂದು ತೋರಿಬಂದರೆ ಸಕಲಸೇನಾಸಮೇತನಾಗಿ ಬಂದು ನಿಮ್ಮ ನಾಲಂದವನ್ನು ಪುಡಿ ಮಾಡಿಯೇನು, ನೆಲಸಮ ಮಾಡಿಯೇನು! ಈ ಮಾತು ಸೂರ್ಯನಾಣೆ ನಿಜ! ಅದರಿಂದ, ಈ ಬಾರಿ ಉತ್ತರ ಕಳುಹಿಸುವಾಗ ವಿಚಾರಮಾಡಿ ಕಳುಹಿಸಿರಿ!''

ಶೀಲಭದ್ರನಿಗೆ ಆ ಪತ್ರ ತಲಪಿತು. ಶಶಾಂಕರಾಜನು ಆಗ ತಾನೆ ನಡೆಸಿದ್ದ ಅತ್ಯಾಚಾರಗಳನ್ನು ಅವನು ಮರೆತಿರಲಿಲ್ಲ. ಬೌದ್ಧಧರ್ಮಕ್ಕೆ ಅಂತಹ ಅಪಘಾತ ಮತ್ತೊಂದು ತಗಲದಿರಲೆಂದು ಹಾರೈಸುತ್ತ ಹುಯೆನ್‌ತ್ಸಾಂಗನನ್ನು ಕಾಮರೂಪಕ್ಕೆ ಕಳುಹಿಸಲು ಒಪ್ಪಿದನು; ಚೀನಾದೇಶಕ್ಕೆ ಹಿಂದಿರುಗಲು ಆತುರಪಡುತ್ತಿದ್ದ ಹುಯೆನ್‌ತ್ಸಾಂಗನನ್ನು ತಡೆದು, "ನೀನು ಕಾಮರೂಪಕ್ಕೆ ಹೋದರೆ ದೊರೆಯೂ ಅವನ ಪ್ರಜೆಗಳೂ ಬೌದ್ಧಧರ್ಮಕ್ಕೆ ಶರಣಾಗುವರು. ನೀನು ಹೋಗದಿದ್ದರೆ ಭಾಸ್ಕರವರ್ಮನು ಬೌದ್ಧಧರ್ಮದ ಮೇಲೆ ಘೋರವಾಗಿ ಯುದ್ಧ ನಡೆಸಿಯಾನು'' ಎಂದು ಹೇಳಿ ಅವನನ್ನೂ ಒಪ್ಪಿಸಿದನು.

ಹುಯೆನ್‌ತ್ಸಾಂಗನು, ಬಂದ ದೂತನೊಡನೆ ನಾಲಂದವನ್ನು ಬಿಟ್ಟು ಹೊರಟು, ಕಾಲಕ್ರಮದಲ್ಲಿ ಕಾಮರೂಪವನ್ನು ಸೇರಿದನು. ಭಾಸ್ಕರವರ್ಮನು ಅತ್ಯಾನಂದದಿಂದ ಅವನನ್ನು ಎದುರುಗೊಂಡನು. ರಾಜ್ಯದ ಮುಖ್ಯಾಧಿಕಾರಿಗಳೂ ಅರಸನೊಡನೆ ಬಂದು, ಬಂದ ಅತಿಥಿಗೆ ಸ್ವಾಗತ ಬಯಸಿ, ಅರಮನೆಗೆ ಕರೆದುಕೊಂಡುಹೋದರು. ಹುಯೆನ್‌ತ್ಸಾಂಗನು ಭಾಸ್ಕರವರ್ಮನ ಧರ್ಮಕುತೂಹಲಕ್ಕೆ ಸಂತೋಷಪಟ್ಟು, ಅವನಿಗೆ

ಬೌದ್ಧ ಧರ್ಮವನ್ನು ವಿವರಿಸುತ್ತ, ಅವನ ಆತಿಥ್ಯವನ್ನು ಕೈಕೊಳ್ಳುತ್ತಿದ್ದನು.

## ಹುಯೆನ್‌ತ್ಸಾಂಗನೂ ಹರ್ಷನೂ

ಆ ವೇಳೆಗೆ ಹರ್ಷವರ್ಧನನು ತನ್ನ ಕೊಂಗ್ಯೋಧದ ವಿಜಯವನ್ನು ಮುಗಿಸಿ, ಬಂಗಾಳದ ಕಜುಘಿರದಲ್ಲಿ ತಂಗಿದ್ದನು. ಅಲ್ಲಿರುವಾಗ, ಹುಯೆನ್‌ತ್ಸಾಂಗನು ಕಾಮರೂಪಕ್ಕೆ ಹೋಗಿರುವ ಸುದ್ದಿ ಅವನ ಕಿವಿಗೆ ಬಿತ್ತು. ಅರಸನಿಗೆ ಆಶ್ಚರ್ಯವಾಯಿತು; "ಅರೇ! ಹಿಂದೆ ನಾನು ಕರೆದರೂ ಬರದೆ, ಈಗ ಆತನು ಕಾಮರೂಪಕ್ಕೆ ಹೋದುದು ಏಕೆ?" ಎನ್ನುತ್ತ, ಹುಯೆನ್‌ತ್ಸಾಂಗನನ್ನು ತನ್ನೆಡೆಗೆ ಕಳುಹಿಸಿಕೊಡಬೇಕೆಂದು ಭಾಸ್ಕರವರ್ಮನ ಬಳಿಗೆ ದೂತನನ್ನು ಅಟ್ಟಿದನು.

ಹುಯೆನ್‌ತ್ಸಾಂಗನ ಸಹವಾಸದಲ್ಲಿ ಇನ್ನೂ ಕೆಲವು ಕಾಲ ಇರಬೇಕೆಂಬ ಆಸೆಯ ಭರದಲ್ಲಿ, ಭಾಸ್ಕರವರ್ಮನು "ನನ್ನ ತಲೆಯನ್ನಾದರೂ ಕಳುಹಿಸಿಯೇನು, ಹುಯೆನ್‌ತ್ಸಾಂಗನನ್ನು ಕಳುಹವೊಲ್ಲೆ!" ಎಂದು ಹರ್ಷನಿಗೆ ಉತ್ತರ ಕಳುಹಿಸಿದನು.

ಆ ಉತ್ತರ ಕೇಳಿ ಹರ್ಷನಿಗೆ ಕೋಪ ಬಂತು. "ಒಬ್ಬ ಭಿಕ್ಷುವನ್ನು ಕಳುಹಿಸಿಕೊಡೆಂಬ ಮಾತಿಗೆ ಇಂತಹ ಒರಟು ಉತ್ತರ ಕೊಡುವಷ್ಟು ಸೊಕ್ಕೆ ಈ ಸಾಮಂತನಿಗೆ? ನನ್ನನ್ನು ತೃಣೀಕರಿಸುವನಲ್ಲವೆ ಈ ಭಾಸ್ಕರವರ್ಮ?" ಎಂದು ಮುನಿದು, "ನೀನೆಂದಂತೆಯೆ ಆಗಲಿ! ಹಿಂದಿರುಗುವ ಈ ದೂತನೊಡನೆ ನಿನ್ನ ತಲೆಯನ್ನೇ ಕಳುಹು!" ಎಂದು ಕಾಮರೂಪಕ್ಕೆ ಆಜ್ಞೆಯಟ್ಟಿದನು.

ಹರ್ಷನ ಕೋಪವನ್ನು ನೆನೆದು ಭಾಸ್ಕರವರ್ಮನು ನಡುಗಿದನು; ತನ್ನ ಅವಿವೇಕಕ್ಕೆ ಮರುಗಿದನು. ಅರಸನ ಕೋಪವನ್ನು ಶಾಂತಗೊಳಿಸಲು ತಾನೇ ಪ್ರತ್ಯಕ್ಷವಾಗಿ ಹೋಗುವುದೇ ಲೇಸೆಂದು, ಹುಯೆನ್‌ತ್ಸಾಂಗನನ್ನು ಕರೆದುಕೊಂಡು ಹರ್ಷನ ಬಳಿಗೆ ಹೊರಟನು. ಜೊತೆಯಲ್ಲಿ ೨೦,೦೦೦ ಆನೆಗಳೂ ೩೦,೦೦೦ ಹಡಗುಗಳೂ ಪ್ರಯಾಣಕ್ಕೆ ಸಿದ್ಧವಾದವು. ಭಾಸ್ಕರವರ್ಮನೂ ಹುಯೆನ್‌ತ್ಸಾಂಗನೂ ಗಂಗಾನದಿಯ

ಮೂಲಕವಾಗಿ ಮಾರ್ಗವನ್ನು ಮುಗಿಸಿ, ಕಜುಂಘಿರಕ್ಕೆ ಬಂದರು. ಭಾಸ್ಕರ ವರ್ಮನ ಆಜ್ಞೆಯಂತೆ, ಗಂಗಾನದಿಯ ಉತ್ತರದಡದಲ್ಲಿ ಒಂದು ವಿಶ್ರಾಮಗೃಹವು ನಿರ್ಮಿತವಾಯಿತು. ಆ ವಿಶ್ರಾಮಗೃಹದಲ್ಲಿ ಹುಯೆನ್ ತ್ಸಾಂಗನನ್ನು ವಿಶ್ರಮಿಸಿಕೊಳಹೇಳಿ, ಭಾಸ್ಕರವರ್ಮನು ಹರ್ಷನ ದರ್ಶನಕ್ಕೆ ಹೋದನು.

ಹರ್ಷನಿಗೆ ಭಾಸ್ಕರವರ್ಮನನ್ನು ಕಂಡು, ಜೊತೆಯಲ್ಲಿ ಹುಯೆನ್ ತ್ಸಾಂಗನೂ ಬಂದಿರಬೇಕೆಂದು ಸಂತೋಷವಾಯಿತು ; ಅದರಿಂದ ಅವನ ಮುನ್ನಿನ ಅಪಚಾರವನ್ನೂ ತನ್ನ ಕೋಪವನ್ನೂ ನೆನೆಯದೆ "ಚೀನದ ಆ ಮಹಾಸಂನ್ಯಾಸಿಯೆಲ್ಲಿ ?" ಎಂದು ಪ್ರಶ್ನಿಸಿದನು.

"ದೇವ, ಆತನು ವಿಶ್ರಾಮಗೃಹದಲ್ಲಿ ತಂಗಿರುವನು."

"ಅವನನ್ನು ನಿನ್ನೊಡನೆ ಕರೆತರಲಿಲ್ಲವೇಕೆ ?"

"ಮಹಾರಾಜ, ಶೀಲವಂತರನ್ನೂ ಧರ್ಮಾತ್ಮರನ್ನೂ ನೀವು ಎಷ್ಟು ಗೌರವಿಸುವಿರೆಂಬುದನ್ನು ನಾನು ಬಲ್ಲೆ. ಅದರಿಂದ ತಾವೇ ಅವನನ್ನು ಕರೆಕಳುಹಿಸುವಿರೆಂದು ನಾನು ಕರೆತರಲಿಲ್ಲ."

"ಒಳ್ಳೆಯದು. ನೀನೂ ಹೋಗಿ ವಿಶ್ರಮಿಸಿಕೊ. ನಾಳೆ ನಾವೇ ಬಂದು ಆ ಸಂನ್ಯಾಸಿಯನ್ನು ಕಾಣುತ್ತೇವೆ" ಎಂದು ಹರ್ಷನು ಭಾಸ್ಕರವರ್ಮನನ್ನು ಬೀಳ್ಕೊಟ್ಟನು.

ಭಾಸ್ಕರವರ್ಮನು ಹುಯೆನ್‌ತ್ಸಾಂಗನ ಬಳಿಗೆ ಬಂದು, ಅರಸನೊಡನೆ ನಡೆದ ಮಾತುಕತೆಗಳನ್ನು ತಿಳಿಸಿ, "ದೊರೆಯು, ನಾಳೆ ಬಂದು ಕಾಣುವೆನೆಂದರೂ, ಈ ರಾತ್ರಿಯೇ ಬಂದರೂ ಬಂದಾನು. ಅದರಿಂದ ಅವನ ಆಗಮನಕ್ಕೆ ನಾವು ಸಿದ್ಧರಾಗಿರುವುದು ಮೇಲು" ಎಂದನು.

ರಾತ್ರಿಯ ಮೊದಲ ಯಾಮದ ವೇಳೆಗೆ ದೊರೆಯು ಬಂದೇ ಬಂದನು. ತನ್ನ ವಿಶ್ರಾಮಗೃಹಕ್ಕೂ ಹುಯೆನ್‌ತ್ಸಾಂಗನು ತಂಗಿದ್ದ ಕಡೆಗೂ ಇದ್ದ ದೂರವನ್ನು ಗಂಗಾನದಿಯ ಮೇಲೆ ಹಡಗಿನಲ್ಲಿ ದಾಟಿ, ಹರ್ಷನು, ಮುಂದೆ ಕಾಲುನಡಿಗೆಯಲ್ಲಿ ಹೊರಟನು. ಅವನೊಡನೆ ನೂರಾರು ಜನ ಚಿನ್ನದ ಪಟಹಗಳನ್ನು ಧ್ವನಿಮಾಡುತ್ತ ಬರುತ್ತಿದ್ದರು.

ಅರಸನು ಕಾಲುನಡಿಗೆಯಲ್ಲಿ ಹೊರಟನೆಂದರೆ, ಒಂದೊಂದು ಹೆಜ್ಜೆಗೆ ಒಂದೊಂದು ಪಟಹಧ್ವನಿಯಾಗಬೇಕಾಗಿತ್ತು. ಆ ಒಂದು ವಿಶೇಷವಾದ ವೈಭವವನ್ನು ಹರ್ಷನು ಮಾತ್ರ ಅನುಭವಿಸುತ್ತಿದ್ದನು; ಮಿಕ್ಕವರು ಅದನ್ನು ಉಪಯೋಗಿಸಕೂಡದಾಗಿತ್ತು.

ಆ ಪಟಹಧ್ವನಿಯನ್ನು ಕೇಳಿ, ದೂರದಲ್ಲಿ ಬೆಳಗುತ್ತಿದ್ದ ನೂರಾರು ಪಂಜುಗಳನ್ನು ಕಂಡು, ಭಾಸ್ಕರವರ್ಮನು ತನ್ನ ಮಂತ್ರಿ ಪರಿವಾರ ದೊಡನೆ ನಡೆದು ಹೋಗಿ ಹರ್ಷನನ್ನು ಎದುರುಗೊಂಡನು. ಎದುರು ಗೊಂಡು, ಅವನನ್ನು ಹುಯೆನ್‌ತ್ಸಾಂಗನ ಸಮ್ಮುಖಕ್ಕೆ ಕರೆತಂದನು. ಮಹಾನುಭಾವನಾದ ಹುಯೆನ್‌ತ್ಸಾಂಗನ ದರ್ಶನದಿಂದ ಹರ್ಷನು ಪುಳ ಕಿತನಾದನು, ಆತನ ಕಾಲಿಗೆ ತಲೆಯಿಟ್ಟು ನಮಸ್ಕರಿಸಿದನು, ಅವನ ಮುಂದೆ ಹೂ ಚೆಲ್ಲಿ ಪೂಜಿಸಿದನು, ಅವನನ್ನು ಕೊನೆಯಿಲ್ಲದೆ ಕೀರ್ತಿ ಸಿದನು.

ಅನಂತರ ಹರ್ಷನೂ ಹುಯೆನ್‌ತ್ಸಾಂಗನೂ ಕುಳಿತು ಕೊಂಚ ಹೊತ್ತು ಮಾತನಾಡಿದರು. ಮಾರನೆಯ ದಿನ ಹುಯೆನ್‌ತ್ಸಾಂಗನು ತನ್ನ ಆತಿಥ್ಯವನ್ನು ಸ್ವೀಕರಿಸಬೇಕೆಂದು ಪ್ರಾರ್ಥಿಸಿ, ಹರ್ಷನು ಹಿಂದಿರುಗಿ ಹೊರಟನು.

ಮಾರನೆಯ ದಿನ ಹುಯೆನ್‌ತ್ಸಾಂಗನನ್ನೂ ಭಾಸ್ಕರವರ್ಮನನ್ನೂ ಕರೆಯಲು ಅರಮನೆಯಿಂದ ದೂತನು ಬಂದನು. ಅರಮನೆಯ ಬಾಗಿಲಲ್ಲಿ ಹರ್ಷನೂ ಅವನ ಮಂತ್ರಿಗಳೂ ನಿಂತು, ಅತಿಥಿಗಳನ್ನು ಆದರಿಸಿ ಒಳಗೆ ಕರೆದೊಯ್ದರು. ಊಟ ಉಪಚಾರಗಳೆಲ್ಲ ಮುಗಿದಮೇಲೆ ಹರ್ಷನು ಹುಯೆನ್‌ತ್ಸಾಂಗನ ಕಡೆ ತಿರುಗಿ "ಮಹಾಯಾನದ ಶ್ರೇಷ್ಠತನವನ್ನು ಬೆಳಗಿ, ಹೀನಯಾನದ ಕುಂದು ಕೊರತೆಗಳನ್ನು ಬಿಚ್ಚಿ ತೋರಿಸುವ ಗ್ರಂಥವನ್ನು ನೀವು ಬರೆದಿರುವಿರಂತೆ. ಅದನ್ನು ನಮಗೆ ತಿಳಿಸಿ ಅನು ಗ್ರಹಿಸಬೇಕು" ಎಂದು ಪ್ರಾರ್ಥಿಸಿದನು.

ಹುಯೆನ್‌ತ್ಸಾಂಗನು ರಾಜಸಭೆಯಲ್ಲಿ ತನ್ನ ಗ್ರಂಥವನ್ನು ವಿವರಿಸಿ ದನು. ಹರ್ಷನ ಹಿಂದುಗಡೆ ರಾಜ್ಯಶ್ರೀ ತಾನೂ ಕುಳಿತು ಹುಯೆನ್‌

ತ್ಸಾಂಗನ ಧರ್ಮಕಥನವನ್ನು ಕೇಳಿದಳು. ಆತನ ಅನುಪಮವಾದ ವಿವರಗಳಿಂದ ಆನಂದಿತಳಾಗಿ, ಆ ಗ್ರಂಥವನ್ನು ಬಾಯಿತುಂಬ ಕೀರ್ತಿಸಿದಳು. ಹರ್ಷನು ತಾನೂ ಆ ಗ್ರಂಥದ ಅಸಾಮಾನ್ಯತೆಗೆ ಬೆರಗಾಗಿ ''ಸೂರ್ಯನ ಎದುರಿಗೆ ಮಿಂಚು ಹುಳು ಮರೆಯಾಗುವಂತೆ, ಮಳೆಗಾಲದ ಗುಡುಗಿನ ನಡುವೆ ಕಲ್ಲುಕುಟ್ಟುವ ಸದ್ದು ಅಡಗುವಂತೆ, ಈ ಗ್ರಂಥದ ಬೆಳಕಿನ ಮುಂದೆ ಹೀನಯಾನವು ತಲೆಯೆತ್ತಲಾರದು. ಈ ಗ್ರಂಥವು ನಮ್ಮನ್ನು ಮೆಚ್ಚಿಸಿದಂತೆಯೇ ಎಲ್ಲ ಶ್ರದ್ಧಾಳುಗಳನ್ನೂ ಮೆಚ್ಚಿಸುವುದು. ಹೀನಯಾನಕ್ಕಿಂತ ಮಹಾಯಾನವೇ ಶ್ರೇಷ್ಠವೆಂದು ತಿಳಿಸುವ ಈ ವಿವರಣೆಯನ್ನು ಕೇಳಿದವರೆಲ್ಲರೂ ಒಪ್ಪುವರು. ಆದರೆ ಹೀನಯಾನದವರು ಈ ದೇಶದಲ್ಲಲ್ಲದೆ ಬೇರೆ ದೇಶಗಳಲ್ಲಿಯೂ ಇರುವರು. ಅವರು ಇಂತಹ ಬೆಳಕನ್ನು ಕಾಣದೆ ಇನ್ನೂ ಅಜ್ಞಾನದ ಕತ್ತಲೆಯಲ್ಲಿ ಇರುವರು. ಅದರಿಂದ ಸರ್ವರೂ ಈ ಗ್ರಂಥವನ್ನು ತಿಳಿದು ತಮ್ಮ ಅಜ್ಞಾನವನ್ನು ಕಳೆದುಕೊಳ್ಳಲೆಂದು, ಕನ್ಯಾಕುಬ್ಜದಲ್ಲಿ ಧರ್ಮಸಭೆಯನ್ನು ನಡೆಸಲು ಬಯಸುವೆನು. ಪಂಚಹಿಂದೂ ದೇಶಗಳ ಶ್ರಮಣ ಬ್ರಾಹ್ಮಣರೆಲ್ಲರೂ ಆ ಸಭೆಗೆ ಬರಲಿ. ಮಹಾಯಾನದ ಮಹಾಪ್ರಭಾವವು ಎಲ್ಲರಿಗೂ ತಿಳಿಯಲಿ. ಹೀನಯಾನದ ಕುಂದುಕೊರತೆಗಳು ಹೊರಬಿದ್ದು ಅದರ ಅನುಯಾಯಿಗಳ ಮನಸ್ಸು ನಿರ್ಮಲವಾಗಲಿ. ಚೀನಾದೇಶದ ಮಹಾಶ್ರಮಣನ ತೇಜಸ್ಸು ಬೆಳಗಲಿ'' ಎಂದು ರಾಜಧಾನಿಯಾದ ಕನ್ಯಾಕುಬ್ಜದಲ್ಲಿ, ಚೀನದ ಮಹಾಶ್ರಮಣನಾದ ಹುಯೆನ್‌ತ್ಸಾಂಗನ ನೇತೃತ್ವದಲ್ಲಿ ನಡೆಯುವ ಬೌದ್ಧಧರ್ಮದ ಸಭೆಗೆ, ಎಲ್ಲ ದೇಶದ ಎಲ್ಲ ಮತಾನುಯಾಯಿಗಳು ಬರಬೇಕೆಂದು ಸುದ್ದಿ ಕಳುಹಿಸಿದನು.

## ಹರ್ಷನು ನಡೆಸಿದ ಧರ್ಮಸಭೆ

ಆಗ ವರ್ಷಾಕಾಲ ಪ್ರಾರಂಭವಾಗಿತ್ತು. ಹರ್ಷ, ಹುಯೆನ್‌ತ್ಸಾಂಗ್ ಭಾಸ್ಕರವರ್ಮರು ರಾಜಧಾನಿಯನ್ನು ಕುರಿತು ಹೊರಟರು. ಹರ್ಷನು ಗಂಗೆಯ ದಕ್ಷಿಣ ತೀರದಲ್ಲಿಯೂ ಭಾಸ್ಕರವರ್ಮನು ಗಂಗೆಯ ಉತ್ತರ ತೀರದಲ್ಲಿಯೂ ಭೂಮಾರ್ಗವಾಗಿ ಹೊರಟರು; ಹುಯೆನ್‌ತ್ಸಾಂಗನನ್ನು ಹೊತ್ತ ಹಡಗು ಗಂಗೆಯ ಮೇಲೆ ಸಾಗಿತು. ಇಬ್ಬರು ದೊರೆಗಳನ್ನೂ

ಬಳಸಿ ಸಾವಿರಾರು ಪರಿವಾರ ಹೊರಟಿತು. ಕೆಲವರು ದೋಣಿಗಳಲ್ಲಿ ಬಂದರು, ಕೆಲವರು ಆನೆಗಳ ಮೇಲೆ ಹೊರಟರು. ದಾರಿಯ ಉದ್ದಕ್ಕೂ ಕೆಲವರು ಕೊಳಲು ಬಾರಿಸುವರು, ಕೆಲವರು ವೀಣೆ ಬಾರಿಸುವರು; ಕೆಲವರು ಪಟಹಗಳನ್ನು ಧ್ವನಿಮಾಡುವರು, ಕೆಲವರು ಕೊಂಬು ಕಹಳೆಗಳನ್ನು ಧ್ವನಿಮಾಡುವರು. ಹೀಗೆ ವಿಶೇಷ ಸಂಭ್ರಮದಿಂದ ಹುಯೆನ್ತ್ಸಾಂಗನನ್ನು ಧರ್ಮಸಭೆಗಾಗಿ ಕರೆದೊಯ್ದರು. ಈ ರೀತಿ ಹೊರಟು, ಕಜುಘಿರವನ್ನು ವರ್ಷಾಕಾಲದ ಮೊದಲಿಗೆ ಬಿಟ್ಟವರು, ವರ್ಷಾಕಾಲ ಮುಗಿಯುವ ವೇಳೆಗೆ ಕನ್ಯಾಕುಬ್ಜಕ್ಕೆ ಬಂದರು. ಬಂದು, ಗಂಗೆಯ ಪಶ್ಚಿಮ ದಡದಲ್ಲಿ ತಮಗಾಗಿ ಕಟ್ಟಿದ್ದ ಭವನಗಳಲ್ಲಿ ತಂಗಿದರು.

ಆ ವೇಳೆಗೆ, ಹರ್ಷನ ಧರ್ಮಸಭೆಗಾಗಿ ಪಂಚಹಿಂದೂದೇಶಗಳ ಹದಿನೆಂಟು ದೊರೆಗಳು ಬಂದಿದ್ದರು; ವಲ್ಲಭೀರಾಜನಾದ ಧ್ರುವಭಟ್ಟನೂ ಬಂದಿದ್ದನು. ಮಹಾಯಾನ ಹೀನಯಾನಗಳನ್ನು ಅನುಸರಿಸುವ ಮೂರು ಸಾವಿರ ಬೌದ್ಧ ಭಿಕ್ಷುಗಳು; ಸುಮಾರು ಮೂರು ಸಾವಿರ ಬ್ರಾಹ್ಮಣರು, ಜೈನರು; ನಾಲಂದದಿಂದ ಸುಮಾರು ಸಾವಿರ ಭಿಕ್ಷುಗಳು;—ಎಲ್ಲರೂ ಪಂಡಿತರು, ವಾದದಲ್ಲಿ ಸಮರ್ಥರು, ಸದ್ಧರ್ಮಶ್ರವಣಕ್ಕಾಗಿ ಅಲ್ಲಿ ಬಂದು ನೆರೆದಿದ್ದರು. ಅವರ ಹಿಂದೆ ಕೆಲವರು ಆನೆಗಳ ಮೇಲೆ ಬಂದರು, ರಥಗಳಲ್ಲಿ ಬಂದರು, ಪಲ್ಲಕ್ಕಿಗಳಲ್ಲಿ ಬಂದರು. ಎಲ್ಲರೂ ಮಳೆಗಾಲದ ಮೋಡಗಳಂತೆ ಗುಂಪು ಗುಂಪಾಗಿ ಬಂದು, ಅನೇಕ ಮೈಲಿಗಳ ಪರ್ಯಂತ ಹರಡಿಕೊಂಡಿದ್ದರು.

ಹರ್ಷನು ಮುಂದಾಗಿಯೇ ಮಾಡಿದ ಆಜ್ಞೆಯ ಮೇರೆ ಎರಡು ಸಭಾಭವನಗಳು ನಿರ್ಮಿತವಾಗಿದ್ದುವು. ಎರಡೂ ವಿಶಾಲವಾಗಿ ಎತ್ತರವಾಗಿದ್ದುವು; ಒಂದೊಂದೂ ಸಾವಿರಾರು ಜನರನ್ನು ಹಿಡಿಸುತ್ತಿತ್ತು. ದೊರೆಯು ತಂಗಿದ್ದ ಅರಮನೆಗೂ ಆ ಸಭಾಗೃಹಗಳಿಗೂ ನಡುವೆ ಅನೇಕ ಅಲಂಕೃತವಾದ ಭವನಗಳಿದ್ದುವು. ಹರ್ಷನು ತನ್ನ ಅರಮನೆಯಲ್ಲಿ ಒಂದು ಬುದ್ಧನ ವಿಗ್ರಹವನ್ನು ಎರಕ ಹೊಯಿಸಿದ್ದನು. ಮೇಲೆ ಹೇಳಿದ ಎರಡು ಸಭಾಭವನಗಳಲ್ಲಿ ಒಂದು ಆ ವಿಗ್ರಹಕ್ಕೆ ಪೂಜೆ ನಡೆಸುವುದಕ್ಕೆಂದೂ, ಇನ್ನೊಂದು ಧರ್ಮಸಭೆ ನಡೆಸುವುದಕ್ಕೆಂದೂ ಗೊತ್ತಾಗಿತ್ತು.

ಉತ್ಸವದ ದಿನ ಬಂತು. ಹರ್ಷನು ಸಕಲ ಅಲಂಕಾರಗಳಿಂದ ಸಜ್ಜಿತವಾದ ಆನೆಯನ್ನು ತರಿಸಿದನು, ಅದರ ಬೆನ್ನ ಮೇಲೆ ಮಣಿಖಚಿತ ವಾದ ಪೀಠವನ್ನಿಟ್ಟು ಬುದ್ಧನ ವಿಗ್ರಹವನ್ನು ಬಿಜಯಮಾಡಿಸಿದನು. ತಾನೇ ದೇವೇಂದ್ರನಂತೆ ವೇಷಹಾಕಿಕೊಂಡು, ಕೈಯಲ್ಲಿ ಶ್ವೇತಚ್ಛತ್ರ ಹಿಡಿದು, ಆ ವಿಗ್ರಹದ ಎಡಗಡೆ ನಿಂತನು; ಭಾಸ್ಕರವರ್ಮನು ಬ್ರಹ್ಮ ನಂತೆ ವೇಷ ಹಾಕಿಕೊಂಡು, ಕೈಯಲ್ಲಿ ಬಿಳಿಯ ಚಾಮರ ಹಿಡಿದು, ಆ ವಿಗ್ರಹದ ಬಲಗಡೆ ನಿಂತನು. ಇಬ್ಬರೂ ದೇವತೆಗಳಂತೆ ಕಿರೀಟ ಧರಿಸಿ, ರತ್ನಖಚಿತವಾದ ಹಾರಗಳನ್ನೂ ಹೂಮಾಲೆಗಳನ್ನೂ ಹಾಕಿಕೊಂಡಿ ದ್ದರು. ಹರ್ಷನು ದಾರಿಯುದ್ದಕ್ಕೂ ಮುತ್ತುರತ್ನಗಳನ್ನೂ ಚಿನ್ನ ಬೆಳ್ಳಿ ಗಳಿಂದ ಮಾಡಿದ ಹೂಗಳನ್ನೂ ಚೆಲ್ಲುತ್ತಿದ್ದನು. ಆ ವಿಗ್ರಹದ ಹಿಂದೆ ಎರಡು ಮಹಾಗಜಗಳು ಸಾಗಿ ಬರುತ್ತ, ತಮ್ಮ ಮೇಲೆ ಹೇರಿದ್ದ ಪುಷ್ಪ ಗಳನ್ನು ಹೆಜ್ಜೆ ಹೆಜ್ಜೆಗೂ ಎತ್ತಿ ಎರಚುತ್ತಿದ್ದವು. ಆ ವಿಗ್ರಹದ ಹಿಂದೆ ಮುಂದೆ ಹರಡಿಕೊಂಡಿದ್ದ ನೂರು ಆನೆಗಳ ಮೇಲೆ ವಾದ್ಯಗಾರರು ಕುಳಿತು ತಮ್ಮ ತಮ್ಮ ವಾದ್ಯಗಳನ್ನು ನುಡಿಸುತ್ತಿದರು. ವಿಗ್ರಹದ ಅಕ್ಕಪಕ್ಕ ದಲ್ಲಿ ನಿಂತ ಆ ಇಬ್ಬರು ದೊರೆಗಳಿಗೆ ಕಾವಲಾಗಿ ಐನೂರು ಐನೂರು ಆನೆಯ ಎರಡು ಸೇನೆ ಬರುತ್ತಿತ್ತು.

ಅವರ ಹಿಂದೆ, ಹುಯೆನ್‌ತ್ಸಾಂಗನೂ ಹರ್ಷನ ರಾಜ್ಯದ ಮುಖ್ಯಾಧಿ ಕಾರಿಗಳೂ ಆನೆಗಳ ಮೇಲೆ ಹತ್ತಿ ಹಿಂಬಾಲಿಸಿದರು. ಅದಲ್ಲದೆ, ದೇಶ ದೇಶಗಳಿಂದ ಬಂದ ದೊರೆಗಳೂ ಅವರ ಅಧಿಕಾರಿಗಳೂ ತಾವೂ ಆನೆ ಗಳನ್ನೇರಿ, ಕ್ರಮವನ್ನನುಸರಿಸಿ ಉತ್ಸವದ ಜೊತೆಗೆ ಸೇರಿದರು. ಹೀಗೆ ಉತ್ಸವವು ಅತಿ ವಿಜೃಂಭಣೆಯಿಂದ ಸಾಗಿತು. ಸಾಗಿ, ಆ ವಿಗ್ರಹಕ್ಕಾಗಿ ಕಟ್ಟಿದ್ದ ಭವನವನ್ನು ಸೇರಿತು.

ಆಗ, ಎಲ್ಲರೂ ಆನೆಗಳಿಂದ ಕೆಳಗಿಳಿದರು. ಹರ್ಷನು ಬುದ್ಧನ ವಿಗ್ರಹವನ್ನು ಪರಿಮಳಜಲದಿಂದ ತೊಳೆದು, ಅದನ್ನು ನಿಯಮಿತವಾದ ಭವನಕ್ಕೆ ತಾನೇ ಎತ್ತಿಕೊಂಡುಹೋದನು; ಅಲ್ಲಿಯ ಸಿಂಹಾಸನದ ಮೇಲೆ ಅದನ್ನು ಸ್ಥಾಪಿಸಿದನು. ದೊರೆಯ ಹಿಂದೆ ಹುಯೆನ್‌ತ್ಸಾಂಗನೂ, ಬಂದಿದ್ದ ಇಪ್ಪತ್ತುದೊರೆಗಳೂ ಒಳಹೊಕ್ಕರು. ಅವರನ್ನು ಅನುಸರಿಸಿ

ಸುಮಾರು ಸಾವಿರ ಭಿಕ್ಷುಗಳೂ, ಐನೂರು ಬ್ರಾಹ್ಮಣರೂ, ಕೆಲವರು ನಾಸ್ತಿಕರೂ ಪ್ರವೇಶಿಸಿದರು. ಮಿಕ್ಕವರೆಲ್ಲ ಹೊರಗೆಯೇ ನಿಂತರು.

ಹರ್ಷನೂ ಇತರರೂ ತಮ್ಮ ತಮ್ಮ ಶಕ್ತಿಯಿದ್ದಷ್ಟು ವಸ್ತು ವಿಶೇಷಗಳನ್ನು ಅರ್ಪಿಸಿ ಬುದ್ಧನನ್ನು ಪೂಜಿಸಿದರು. ದೊರೆಯಂತೂ ಒಂದು ಚಿನ್ನದ ತಟ್ಟೆ, ಒಂದು ಚಿನ್ನದ ಬಟ್ಟಲು, ಏಳು ಚಿನ್ನದ ಹರಿವಾಣ, ಒಂದು ಚಿನ್ನದ ದಂಡ, ಮೂರುಸಾವಿರ ಚಿನ್ನದ ನಾಣ್ಯ, ಮೂರು ಸಾವಿರ ಬಟ್ಟೆಬರೆಗಳನ್ನು ಅರ್ಪಿಸಿದನು.

ಅನಂತರ, ಆ ಭವನದ ಹೊರಗಿದ್ದವರಿಗೂ ಒಳಗಿದ್ದವರಿಗೂ ಒಂದೇ ತೆರನಾಗಿ ಊಟ ಉಪಚಾರ ನಡೆಯಿತು. ಅದಾದ ಮೇಲೆ ಧರ್ಮಸಭೆ ಮೊದಲಾಯಿತು. ಹರ್ಷನು ಒಂದು ಧರ್ಮಪೀಠವನ್ನು ಏರ್ಪಡಿಸಿ, ಅಲ್ಲಿ ಹುಯೆನ್‌ತ್ಸಾಂಗನನ್ನು ಕುಳ್ಳಿರಿಸಿ, ಆ ಸಭೆಗೆ ಅವನೇ ಅಧ್ಯಕ್ಷನಾಗಬೇಕೆಂದು ಪ್ರಾರ್ಥಿಸಿದನು. ಅದಕ್ಕೆ ಹುಯೆನ್‌ತ್ಸಾಂಗನು ಒಪ್ಪಿದನು; ಮೊದಲು ತಾನು ಎದ್ದು ಮಹಾಯಾನದ ಮಹತ್ವವನ್ನು ಕೀರ್ತಿಸಿದನು. ಅನಂತರ ಅದಕ್ಕೆ ಸಂಬಂಧಿಸಿದ ವಿಷಯವೊಂದನ್ನು ಆರಿಸಿ, ಅದನ್ನು ವಿವರಿಸುವಂತೆ ನಾಲಂದದ ಭಿಕ್ಷುವೊಬ್ಬನನ್ನು ಕರೆದನು. ಅಲ್ಲದೆ, "ಈಗ ವಿವರಿಸುವುದರಲ್ಲಿ ಯಾರಾದರೂ ಏನಾದರೂ ಕುಂದು ತೋರಿಸಿದರೆ, ಅದು ತಪ್ಪೆಂದು ವಾದಮಾಡಿ ಜಯಿಸಿದರೆ, ಅವರಿಗೆ ನನ್ನ ತಲೆ ಕೊಡಲೂ ಸಿದ್ಧನಾಗಿರುವೆನು" ಎಂಬ ಅರ್ಥವನ್ನು ಬರೆಯಿಸಿ ಪ್ರಸಿದ್ಧಪಡಿಸಿದನು.

ಹುಯೆನ್‌ತ್ಸಾಂಗನ ಮಾತಿನಂತೆ, ನಾಲಂದದ ಭಿಕ್ಷುವು ನಿಯಮಿತವಾದ ವಿಷಯವನ್ನು ವಿವರಿಸಿದನು. ಆದರೆ ಸಂಜೆಯಾದರೂ, ಅದಕ್ಕೆ ಪ್ರತಿಹೇಳಬಲ್ಲವನು ಯಾವನೂ ಎದ್ದೇಳಲಿಲ್ಲ. ಹರ್ಷನು ಮಹಾಯಾನದ ವಿಜಯಕ್ಕೆ ಸಂತೋಷಿಸಿ ಅಂದಿನ ಸಭೆಯನ್ನು ಮುಗಿಸಿದನು.

ಮಾರನೆಯ ದಿನ ಕೂಡ, ಬೆಳಿಗ್ಗೆ ಪೂಜೆಯಾದಮೇಲೆ, ಹಿಂದಿನ ದಿನದಂತೆ ಸಭೆ ಸೇರಿತು; ಅಂದು ಕೂಡ ಮಹಾಯಾನಕ್ಕೆ ಪ್ರತಿಹೇಳುವವರು ಯಾರೂ ಇರಲಿಲ್ಲ. ಹೀಗೆ ಐದು ದಿನಗಳಾದರೂ, ಮಹಾ

ಯಾನಕ್ಕೆ ಬದಲು ಹೇಳಬಲ್ಲವರಾರೂ ಇಲ್ಲದೆ ಮಹಾಯಾನದ ಕೈ ಮೇಲಾಗುತ್ತಿರುವುದನ್ನು ಕಂಡು, ಹೀನಯಾನದವರ ಹೊಟ್ಟೆ ಉರಿದು ಹೋಯಿತು. ಆ ಹೊಟ್ಟೆಯುರಿ ಹುಯೆನ್‌ತ್ಸಾಂಗನ ಕಡೆ ಹರಿದು, ಅವನ ಜೀವ ತೆಗೆಯಬೇಕೆಂದು ಅವರು ಆಲೋಚಿಸಿದರು.

ಆ ಸುದ್ದಿ ಹೇಗೋ ಹರ್ಷನ ಕಿವಿ ಮುಟ್ಟಿತು. ಆ ಕ್ಷಣವೇ ಅವನು ''ಸತ್ಯವನ್ನು ಕಂಡರೆ ಮಿಥ್ಯೆಗೆ ಎಂದೂ ಸೈರಣೆಯಿಲ್ಲ. ತಪ್ಪುತಪ್ಪಾದ ಧರ್ಮವನ್ನು ಅನುಸರಿಸುವವರು ಜನರಿಗೆ ಮೋಸಮಾಡುತ್ತಾರೆ. ಸದ್ಧರ್ಮವನ್ನು ಬೋಧಿಸುವವರನ್ನು ಕಂಡರೆ ಅವರಿಗೆ ಆಗುವುದಿಲ್ಲ. ಪಂಡಿತನಾದ ಹುಯೆನ್‌ತ್ಸಾಂಗನು ಚೀನಾದೇಶದಿಂದ ಬಂದಿರುವನು. ಆತನು ಜನರ ತಪ್ಪುತಿಳುವಳಿಕೆಯನ್ನು ತಿದ್ದಿ, ಅವರನ್ನು ಮುಕ್ತಿಮಾರ್ಗಕ್ಕೆ ಕರೆದೊಯ್ಯುವುದಕ್ಕಾಗಿ ಇಲ್ಲಿ ನಿಂತು, ತನ್ನ ಅಮೋಘವಾಣಿಯಿಂದ ಮಹಾಯಾನದ ಲಕ್ಷಣಗಳನ್ನು ಸ್ಪಷ್ಟವಾಗಿ ವಿವರಿಸಿರುವನು. ಆದರೆ ತಪ್ಪು ಧರ್ಮವನ್ನು ಅನುಸರಿಸುವವರು ತಮ್ಮ ತಪ್ಪಿಗಾಗಿ ಪರಿತಾಪ ತೋರಿಸದೆ, ತಪ್ಪನ್ನೂ ಬಿಡದೆ, ಆತನ ಮೇಲೆ ವಿಷ ಕಾರುವರು; ಅವನನ್ನು ಕೊಲ್ಲಲು ಆಲೋಚಿಸಿರುವರು. ಈ ವಿಷಯವು ಕೇಳಿದವರೆಲ್ಲರ ಮನಸ್ಸನ್ನೂ ಕದಡಿಸುವುದು. ಅದರಿಂದ, ಹುಯೆನ್‌ತ್ಸಾಂಗನನ್ನು ಕೊಲ್ಲುವುದಿರಲಿ, ಯಾವನಾದರೂ ಆತನ ಗೋಜಿಗೆ ಹೋದರೆ ಸಾಕು— ಅವನ ತಲೆಯನ್ನು ಕಡಿಸಿಯೇವು! ಆತನಿಗೆ ಪ್ರತಿಯಾಗಿ ನುಡಿದವನ ನಾಲಗೆ ಸೀಳಿಸಿಯೇವು! ಆದರೆ, ಆತನ ಉಪದೇಶದ ಲಾಭ ಪಡೆಯುವವರಿಗೆ ನಮ್ಮ ಅನುಗ್ರಹವುಂಟು'' ಎಂದು ಶಾಸನಮಾಡಿದನು. ಅಂದಿನಿಂದ ಆ ದುಷ್ಟರ ಆಟಗಳೆಲ್ಲ ಅಡಗಿದುವು. ಹುಯೆನ್‌ತ್ಸಾಂಗನಿಗೆ ಕೇಡು ಬಯಸುವಷ್ಟು ಧೈರ್ಯ ಕೂಡ ಯಾರಿಗೂ ಇರಲಿಲ್ಲ.

ಹೀಗೆ ಇನ್ನೂ ಹದಿನೆಂಟು ದಿವಸ ಕಳೆಯಿತು. ಮಹಾಯಾನದಲ್ಲಿ ಹುಳುಕುಗಳನ್ನು ತೋರಿಸಬಲ್ಲವರು ಯಾರೂ ಬರಲಿಲ್ಲ. ಮಹಾಯಾನಕ್ಕೇ ಪೂರ್ಣ ವಿಜಯವಾಯಿತು. ಕಡೆಯ ದಿನ ಸಾಯಂಕಾಲ ಸಭೆಯನ್ನು ಮುಗಿಸುತ್ತ, ಹುಯೆನ್‌ತ್ಸಾಂಗನು ಪುನಃ ಮಹಾಯಾನದ ಉತ್ಕೃಷ್ಟತೆಯನ್ನು ತಿಳಿಸಿ, ಕೇಳಿದವರ ಮನಸ್ಸಿಗೆ ಅಂಟುವಂತೆ ಬುದ್ಧ

ಭಗವಾನನ ಧರ್ಮವನ್ನು ವಿವರಿಸಿದನು. ಆ ಉಪದೇಶದ ಫಲವಾಗಿ ನೂರಾರು ಜನರು ಸದ್ಧರ್ಮವನ್ನು ಗ್ರಹಣಮಾಡಿದರು; ಹೀನಯಾನದವರೂ ಅನೇಕರು ಮಹಾಯಾನಕ್ಕೆ ಶರಣಾಗತರಾಗಿ ಸೇರಿದರು. ಹೀಗೆ ವಿಜಯಿಯಾದ ಹುಯೆನ್‌ತ್ಸಾಂಗನಿಗೆ, ಹರ್ಷನು ಹತ್ತು ಸಾವಿರ ಚಿನ್ನದ ನಾಣ್ಯವನ್ನೂ, ಮೂವತ್ತುಸಾವಿರ ಬೆಳ್ಳಿಯ ನಾಣ್ಯವನ್ನೂ, ನೂರು ಉಣ್ಣೆಯ ಬಟ್ಟೆಗಳನ್ನೂ ಗೌರವದ ಗುರುತಾಗಿ ಕೊಟ್ಟನು. ಆ ಧರ್ಮ ಸಭೆಗೆ ಬಂದಿದ್ದ ಪ್ರತಿಯೊಬ್ಬ ದೊರೆಯೂ ಅನೇಕ ಅಪೂರ್ವ ವಸ್ತುಗಳನ್ನು ಕೊಟ್ಟನು. ಬೌದ್ಧ ಸಂನ್ಯಾಸಿಯಾದ ಹುಯೆನ್‌ತ್ಸಾಂಗನು ಅವುಗಳನ್ನು ಸ್ವೀಕರಿಸಲಿಲ್ಲ!

ಅದಾದನಂತರ ಆನೆಯ ಮೇಲೆ ಅಂಬಾರಿಯಲ್ಲಿ ಹುಯೆನ್‌ತ್ಸಾಂಗನನ್ನು ಮೆರವಣಿಗೆ ಮಾಡಲು ಹರ್ಷನು ಆಜ್ಞೆಮಾಡಿದನು. ಆದರೆ ಆ ರೀತಿಯಲ್ಲಿ ಬಹುಮಾನಿತನಾಗಿ ಮೆರವಣಿಗೆ ಮಾಡಿಸಿಕೊಳ್ಳಲು ಹುಯೆನ್‌ತ್ಸಾಂಗನು ಇಷ್ಟಪಡಲಿಲ್ಲ. ಆದರೂ, ಹರ್ಷನು ಬಂದು "ವಾದದಲ್ಲಿ ವಿಜಯಿಯಾದವನನ್ನು ಆನೆಯ ಮೇಲೆ ಅಂಬಾರಿಯಲ್ಲಿ ಕುಳ್ಳಿರಿಸಿ ಮೆರವಣಿಗೆ ಮಾಡುವುದು ನಮ್ಮ ದೇಶದಲ್ಲಿ ಬಹುಕಾಲದಿಂದ ನಡೆದು ಬಂದ ಪದ್ಧತಿ. ಅದನ್ನು ಬೇಡವೆಂದು ಹಾಗೆಲ್ಲ ತಳ್ಳಿಹಾಕುವಂತಿಲ್ಲ" ಎಂದು ಅವನನ್ನು ಒಪ್ಪಿಸಿದನು.

ಪದ್ಧತಿ ತಪ್ಪದ ರೀತಿಯಲ್ಲಿ ಹುಯೆನ್‌ತ್ಸಾಂಗನ ಮೆರವಣಿಗೆಯಾಯಿತು. ರಾಜ್ಯದ ಮಂತ್ರಿಗಳೆಲ್ಲರೂ ಅವನೊಡನೆ ನಡೆದರು. ಹರ್ಷನು ಹುಯೆನ್‌ತ್ಸಾಂಗನ ಕಾಷಾಯವನ್ನು ಹಿಡಿದುಕೊಂಡು "ಚೀನದಿಂದ ಹಿಂದೂದೇಶಕ್ಕೆ ಬಂದು, ಮಹಾಯಾನವನ್ನು ಸಂಸ್ಥಾಪಿಸಿ, ವಾದದಲ್ಲಿ ಬದಲು ಹೇಳಬಲ್ಲವರಿಲ್ಲದೆ ವಿಜಯಿಯಾದ ಹುಯೆನ್‌ತ್ಸಾಂಗನು ಇವನೆ!" ಎಂದು ಘೋಷಿಸಿದನು. ಅದೇ ಸಮಯದಲ್ಲಿ, ಮಹಾಯಾನದವರು, ಹುಯೆನ್‌ತ್ಸಾಂಗನು ಮಹಾಯಾನವನ್ನು ಎತ್ತಿ ಹಿಡಿದುದರಿಂದ, ಅವನನ್ನು "ಮಹಾಯಾನ ದೇವ" ಎಂದು ಕರೆದರು; ಹೀನಯಾನದವರು, ಅವನು ತಮ್ಮ ತಪ್ಪನ್ನು ತೋರಿಸಿ ತಮ್ಮನ್ನು ಮೋಕ್ಷಕ್ಕೆ ಒಯ್ದು

ದರಿಂದ, ಅವನನ್ನು "ಮೋಕ್ಷದೇವ" ಎಂದು ಕರೆದರು. ಹೀಗೆ ಎಲ್ಲರೂ ತೃಪ್ತರಾಗಿರಲು, ಹರ್ಷನು ನಡೆಸಿದ ಧರ್ಮಸಭೆಯು ಕಡೆಗಂಡಿತು.

ಹರ್ಷನು ಬುದ್ಧನ ಪ್ರತಿಮೆಯನ್ನು ಮಾಡಿಸಿ ಪೂಜೆ ಮಾಡಿದುದು, ಬೌದ್ಧನಾದ ಹುಯೆನ್‌ತ್ಸಾಂಗನನ್ನು ಗೌರವಿಸಿದುದು ಮುಂತಾದ ಅವನ ಧರ್ಮಕಾರ್ಯಗಳನ್ನು ಸಹಿಸಲಾರದ ಕೆಲವು ಪಾಷಂಡರೂ ಬ್ರಾಹ್ಮಣರೂ ಆ ಧರ್ಮಸಭೆಗೆ ಬಂದಿದ್ದರು. ಅವರು ಹರ್ಷನನ್ನೇ ಕೊಲ್ಲಬೇಕೆಂದು ಯೋಚಿಸಿ, ಬುದ್ಧನ ಪ್ರತಿಮೆಯಿದ್ದ ಮಂದಿರಕ್ಕೆ ಬೆಂಕಿ ಹಾಕಿದರು. ಮಂದಿರಕ್ಕೆ ಬೆಂಕಿ ಬಿದ್ದಾಗ ನಡೆಯುವ ಗಲಭೆಯಲ್ಲಿ ಹರ್ಷನನ್ನು ಕೊಲ್ಲಬಹುದೆಂದು ಅವರು ಎಣಿಸಿದ್ದರು.

ತಾನು ಅಷ್ಟು ಶ್ರದ್ಧೆಯಿಂದ ಧರ್ಮಕಾರ್ಯಗಳನ್ನು ನಡೆಸಿದ್ದರೂ ತಾನು ಕಟ್ಟಿಸಿದ ಬುದ್ಧನ ಮಂದಿರಕ್ಕೆ ಬೆಂಕಿ ಬಿದ್ದುದು ಕಂಡು, ಹರ್ಷನಿಗೆ ಬಹಳ ಖೇದವಾಯಿತು. "ರಾಜ್ಯದ ಐಶ್ವರ್ಯವನ್ನು ದಾನಮಾಡಿ, ಹಿಂದಿನ ರಾಜರಂತೆ ಸಂಘಾರಾಮಗಳನ್ನು ಕಟ್ಟಿಸಿ, ಉತ್ಕೃಷ್ಟವಾದ ಕಾರ್ಯಮಾಡಬೇಕೆಂದು ಹೊರಟ ನನ್ನ ಪ್ರಯತ್ನವೆಲ್ಲ ಹೀಗೆ ಬೂದಿಯಾಯಿತಲ್ಲವೆ! ಇನ್ನು ನಾನು ಬದುಕಿ ಫಲವೇನು? ನಾನು ಪೂರ್ವದಲ್ಲಿ ಮಾಡಿದ ಪುಣ್ಯದಿಂದ ಈಗ ಚಕ್ರವರ್ತಿಯಾದೆನು. ನಾನು ಶೀಲಗಳನ್ನು ನಡೆಸಿಕೊಂಡಿರುವೆನಾದರೆ ಈ ಬೆಂಕಿಯು ಆರಲಿ; ಇಲ್ಲದಿದ್ದರೆ ನನ್ನ ಈ ದೇಹವೂ ಭಸ್ಮವಾಗಲಿ!" ಎಂದು ಹೇಳುತ್ತ, ಹರ್ಷನು, ತನ್ನನ್ನು ಯಾರೂ ತಡೆಯುವ ಮುಂಚೆಯೇ ಉರಿಯುತ್ತಿದ್ದ ಮಂದಿರಕ್ಕೆ ನುಗ್ಗಿದನು. ಬೌದ್ಧಧರ್ಮಕ್ಕೆ ಅನುಸಾರವಾಗಿ ಶೀಲಗಳನ್ನು ನಡೆಸಿಕೊಂಡು 'ಶೀಲಾದಿತ್ಯ' ಎಂದು ಪ್ರಸಿದ್ಧನಾದ ಹರ್ಷನು ಮೇಲೆ ಹೇಳಿದಂತೆ ಹೇಳಿಕೊಂಡು ನುಗ್ಗಿದ ಕ್ಷಣವೇ ಆ ಮಂದಿರದ ಬೆಂಕಿ ಆರಿಹೋಯಿತು! ಸ್ವಲ್ಪ ಸುಟ್ಟ ಆ ಮಂದಿರವನ್ನು ನೋಡುವುದಕ್ಕೆ ಹರ್ಷನು ಪಕ್ಕದಲ್ಲಿದ್ದ ಸ್ತೂಪವನ್ನೇರಿ ಹೋದನು.

ಆದರೆ ಮಂದಿರದ ಬೆಂಕಿ ಆರಿದರೂ, ಅದಕ್ಕೆ ಬೆಂಕಿಯಿಟ್ಟವರ ಅಸಮಾಧಾನ ಆರಿರಲಿಲ್ಲ. ಅರಸನು ನುಗ್ಗಿದ ಕ್ಷಣ ಆ ಬೆಂಕಿ ಆರಿದುದನ್ನೂ, ಅರಸನು ಬಳಿಯ ಸ್ತೂಪವನ್ನೇರಿದುದನ್ನೂ ಅವರು ಕಂಡರು.

ಹರ್ಷನು ಸ್ತೂಪದಿಂದ ಇಳಿಯುವಾಗ ಅವನನ್ನು ಕೊಲ್ಲುವಂತೆ ಪ್ರೇರಿಸಿ ಒಬ್ಬ ಬ್ರಾಹ್ಮಣನನ್ನು ಕಳುಹಿಸಿದರು. ಆ ಬ್ರಾಹ್ಮಣನು ಸ್ತೂಪವನ್ನು ಹತ್ತುತ್ತ, ಇಳಿಯುತ್ತಿದ್ದ ಹರ್ಷನನ್ನು ತಿವಿಯಬೇಕೆಂದು ಕೈಲಿದ್ದ ಚೂರಿಯನ್ನು ಮೇಲೆತ್ತಿದನು. ಹರ್ಷನು ಅದನ್ನು ಕಂಡು, ಕುಶಲತೆಯಿಂದ ಆ ಏಟು ತಪ್ಪಿಸಿಕೊಂಡು, ಅವನನ್ನು ಬಿಗಿಹಿಡಿದನು; ಅವನ ಮೇಲೆ ನುಗ್ಗಿ ಬಂದ ತನ್ನ ಮಂತ್ರಿಗಳನ್ನು ತಡೆದು "ನನ್ನನ್ನು ಕೊಲ್ಲಲು ನಾನು ನಿನಗೇನು ಮಾಡಿದೆನಯ್ಯ?" ಎಂದು ಎಂದಿನಂತೆ ಸಮಾಧಾನದಿಂದ ಕೇಳಿದನು. ಆಗ, ಬೌದ್ಧರ ಉತ್ಕರ್ಷಕ್ಕಾಗಿ ಅಸಮಾಧಾನಪಟ್ಟವರು ರಾಜಹತ್ಯೆಗೆ ಪಿತೂರಿ ನಡೆಸುತ್ತಿದ್ದುದೆಲ್ಲವೂ ಹೊರಬಿತ್ತು. ಅರಸನು ಆ ಪಿತೂರಿಗೆ ನಾಯಕನಾದವನನ್ನು ಶಿಕ್ಷಿಸಿ, ಮಿಕ್ಕವರನ್ನು ಉದಾರಹೃದಯದಿಂದ ಮನ್ನಿಸಿದನು. ಆ ಪಿತೂರಿಗೆ ಸೇರಿದ್ದ ಸುಮಾರು ಐನೂರು ಬ್ರಾಹ್ಮಣರನ್ನು ಹಿಂದೂದೇಶದ ಗಡಿಯಿಂದ ಆಚೆಗೆ ಓಡಿಸಿ, ಹರ್ಷನು ರಾಜಧಾನಿಗೆ ಹಿಂದಿರುಗಿದನು.

ಈ ಒಂದು ಸಂಗತಿ ಬಿಟ್ಟರೆ, ಹರ್ಷನು ನಡೆಸಿದ ಧರ್ಮಸಭೆಯು ಬಹಳ ಯಶಸ್ವಿಯಾಗಿ ನಡೆಯಿತೆಂದು ಹೇಳಬಹುದು.

## ಹರ್ಷನ ಮೋಕ್ಷಪರಿಷತ್ತು

ಧರ್ಮಸಭೆ ಮುಗಿದ ಮೇಲೆ, ಹರ್ಷನು, ತಾನು ಚಿನ್ನದಲ್ಲಿ ಮಾಡಿಸಿದ ಬುದ್ಧನ ವಿಗ್ರಹವನ್ನೂ ಅದಕ್ಕೆ ಅರ್ಪಿಸಿದ ವಸ್ತ್ರಾಭರಣಗಳನ್ನೂ ಸಮೀಪದಲ್ಲಿದ್ದ ಸಂಘಾರಾಮದ ಭಿಕ್ಷುಗಳಿಗೆ ಒಪ್ಪಿಸಿದನು. ಹುಯೆನ್‌ತ್ಸಾಂಗನು ನಾಲಂದದಿಂದ ಬಂದಿದ್ದ ಭಿಕ್ಷುಗಳನ್ನು ಬೀಳ್ಕೊಂಡು, ಚೀನಕ್ಕೆ ಹಿಂದಿರುಗಲು ಸಿದ್ಧನಾಗಿ ಹರ್ಷನ ಅಪ್ಪಣೆ ಬೇಡಿದನು.

ಅದಕ್ಕೆ ಹರ್ಷನು "ದೇವ! ನಾನು ಚಕ್ರವರ್ತಿಯಾಗಿ ಸುಮಾರು ಮೂವತ್ತು ವರುಷಗಳ ಮೇಲಾಯಿತು. ಆದರೂ ನನಗೊಂದು ಕೊರತೆಯಿದೆ: ನಾನು ಕೂಡಿಸಬೇಕೆಂದಿರುವ ಪುಣ್ಯರಾಶಿಯು ಬೆಳೆಯುತ್ತಿಲ್ಲ. ಅದಕ್ಕಾಗಿ ಎಲ್ಲ ರೀತಿಯಲ್ಲಿಯೂ ಅಮೂಲ್ಯವಾದ ಧನ ಕನಕ ವಸ್ತು ವಾಹನಗಳನ್ನು ಪ್ರಯಾಗದಲ್ಲಿ ಶೇಖರಿಸಿದ್ದೇನೆ. ಗಂಗಾ ಯಮುನಾ

ತೀರಗಳ ನಡುವೆ, ಐದೈದು ವರ್ಷಗಳಿಗೊಮ್ಮೆ ಧರ್ಮಪರಿಷತ್ತನ್ನು ಕೂಡಿಸಿದ್ದೇನೆ. ಆ ಪರಿಷತ್ತಿಗೆ ಪಂಚಹಿಂದೂದೇಶದ ಶ್ರಮಣ ಬ್ರಾಹ್ಮಣ ರನ್ನೆಲ್ಲ ಕರೆಸಿರುವೆನು ; ಬಡವರನ್ನೂ ನಿರ್ಗತಿಕರನ್ನೂ ಅನಾಥರನ್ನೂ ಕರೆಸಿರುವೆನು. ಆ ಸಮಯದಲ್ಲ 'ಮೋಕ್ಷ'ವೆಂಬ ಮಹಾದಾನಕರ್ಮ ವನ್ನು ಎಪ್ಪತ್ತೈದು ದಿವಸ ನಡೆಸಿರುವೆನು. ಈವರೆಗೆ ಅಂತಹ ಐದು ಮೋಕ್ಷ ಪರಿಷತ್ತುಗಳನ್ನು ನಡೆಸಿ, ಈಗ ಆರನೆಯದನ್ನು ನಡೆಸಬೇಕೆಂದಿ ರುವೆನು. ಚೀನಕ್ಕೆ ಹಿಂದಿರುಗುವ ಯೋಚನೆಯನ್ನು ಮುಂದುವರಿಸಿ, ನಮ್ಮ ಮೋಕ್ಷಪರಿಷತ್ತಿಗೆ ನಿಲ್ಲಬಾರದೆ ?" ಎಂದನು.

ಆ ಮಾತು ಕೇಳಿ ಪುಳಕಿತನಾಗಿ, ಹುಯೆನ್‌ತ್ಸಾಂಗನು "ಹಿಂದೆ ಬೋಧಿಸತ್ವನು ಕೂಡ ಇಂತಹ ದಾನದಿಂದಲ್ಲವೆ ಬುದ್ಧನಾದುದು ! ಇತರರ ಸಲುವಾಗಿ ನೀನು ಅಗಣಿತವಾದ ದ್ರವ್ಯವನ್ನು ವ್ಯಯಮಾಡು ವುದಾದರೆ, ನಾನು ನನ್ನ ಸಮಯದಲ್ಲಿ ಸ್ವಲ್ಪವನ್ನಾದರೂ ಕೊಡಲಾರೆನೆ? ಮಹಾರಾಜ, ನೀನು ನಡೆಸುವ ಮೋಕ್ಷವನ್ನು ನಾನೂ ದರ್ಶಿಸಿ ಸಂತೋಷ ಪಡಬಯಸುವೆನು" ಎಂದು ಹರ್ಷನ ಮಾತಿಗೆ ಒಪ್ಪಿದನು. ಆ ಒಪ್ಪಿಗೆ ಯಿಂದ ಹರ್ಷನು ತೃಪ್ತನಾಗಿ, ಹುಯೆನ್‌ತ್ಸಾಂಗನನ್ನು ಕನ್ಯಾಕುಬ್ಜ ದಲ್ಲಿಯೆ ಬಿಟ್ಟು, ತಾನು ಪ್ರಯಾಗಕ್ಕೆ ಮುಂದಾಗಿ ಹೋದನು.

ಪ್ರಯಾಗವಿರುವುದು ಗಂಗಾಯಮುನೆಗಳ ಸಂಗಮ ಸ್ಥಳದಲ್ಲಿ. ಆ ಸಂಗಮದ ಪಶ್ಚಿಮಕ್ಕೆ ಸುಮಾರು ಅರುವತ್ತು ಮೈಲು ಸುತ್ತಳತೆಯ ಬಯಲು ಇತ್ತು. ಪುರಾತನ ಕಾಲದಿಂದ ಆ ಸ್ಥಳದಲ್ಲಿ ಅನೇಕ ರಾಜಾಧಿ ರಾಜರು ಅನೇಕ ದಾನ ಧರ್ಮಗಳನ್ನು ನಡೆಸಿ, ಆ ಸ್ಥಳವು "ದಾನ ಭೂಮಿ" ಎಂದು ಪ್ರಸಿದ್ಧವಾಗಿತ್ತು. ಬೇರೆ ಸ್ಥಳಗಳಲ್ಲಿ ಕೊಟ್ಯನುಕೋಟಿ ದಾನ ಕೊಡುವುದಕ್ಕಿಂತ ಅಲ್ಲಿ ಒಂದು ದಾನ ಕೊಟ್ಟರೂ ಹೆಚ್ಚು ಪುಣ್ಯ ಬರುವುದೆಂದು ಪ್ರತೀತಿ ಬೇರೆ ಇತ್ತು. ಅದರಿಂದ ದಾನಮಾಡಿ ಪುಣ್ಯ ಪಡೆಯಬೇಕೆಂಬವರೆಲ್ಲರೂ ಅಲ್ಲಿಯೇ ಬಂದು ದಾನಮಾಡುತ್ತಿದ್ದರು.

ಆ ದಾನಭೂಮಿಯಲ್ಲಿ ಹರ್ಷನು ಒಂದು ಸಾವಿರ ಹೆಜ್ಜೆಯಳತೆಗಳ ಚೌಕವನ್ನು ಶುದ್ಧಿಗೊಳಿಸಿ, ಅದರ ಸುತ್ತ ಬಿದಿರಿನ ಕಟಕಟೆ ಕಟ್ಟಿಸಿದನು.

ಅದರ ನಡುವೆ ನೂರಾರು ಗುಡಿಸಿಲುಗಳನ್ನು ಎತ್ತಿಸಿ, ದಾನಕೊಡಬೇಕೆಂದಿದ್ದ ವಸ್ತುಗಳನ್ನೆಲ್ಲ ಅಲ್ಲಿ ತುಂಬಿಸಿದನು. ಕೆಲವು ಕಡೆ ಚಿನ್ನ ಬೆಳ್ಳಿಯ ಪಾತ್ರೆಗಳು, ಆಭರಣಗಳು; ಕೆಲವು ಕಡೆ ಮುತ್ತು, ರತ್ನ, ಕೆಂಪು, ಇಂದ್ರನೀಲ, ಮಹಾನೀಲಗಳೆಂಬ ಬೆಲೆಬಾಳುವ ಮಣಿಗಳು; ಇನ್ನು ಕೆಲವು ಕಡೆ ಚಿನ್ನ ಬೆಳ್ಳಿಯ ನಾಣ್ಯಗಳು, ಅನೇಕ ತೆರದ ಬಟ್ಟೆಬರೆಗಳು—ಹೀಗೆ ವಿವಿಧ ವಸ್ತುಗಳನ್ನು ರಾಶಿಹಾಕಿಸಿದನು. ಆ ಕಟಕಟೆಯ ಸುತ್ತ ಭೋಜನಶಾಲೆಗಳನ್ನು ಏರ್ಪಡಿಸಿದನು. ಬಳಿಯಲ್ಲಿ, ಸಾವಿರಾರು ಜನರು ವಿಶ್ರಮಿಸಿಕೊಳ್ಳಬಹುದಾದ ಭವನಗಳನ್ನು ಕಟ್ಟಿಸಿದನು.

ಮೋಕ್ಷಪರಿಷತ್ತಿಗೆ ಹೀಗೆ ಸಿದ್ಧತೆಗಳಾಗುತ್ತಿರಲು, ಅರಸನ ಆಜ್ಞೆಯಂತೆ ಸಾಮ್ರಾಜ್ಯದ ಮೂಲೆಮೂಲೆಗಳಿಂದಲೂ ಅರ್ಥಿಗಳು ದಾನಭೂಮಿಗೆ ಇಳಿಯಲಾರಂಭಿಸಿದರು; ಶ್ರಮಣರು, ಬ್ರಾಹ್ಮಣರು, ಜೈನರು, ಬಡವರು, ಅನಾಥರು—ಎಲ್ಲರೂ ಬರಲಾರಂಭಿಸಿದರು. ಕನ್ಯಾಕುಬ್ಜದಿಂದ ಹುಯೆನ್‌ತ್ಸಾಂಗನೂ, ಹರ್ಷನ ಧರ್ಮಸಭೆಗಾಗಿ ಬಂದಿದ್ದ ಇಪ್ಪತ್ತು ಜನ ರಾಜರೂ ಪ್ರಯಾಗಕ್ಕೆ ಬಂದರು. ಆ ವೇಳೆಗೆ ಅಲ್ಲಿ ನೆರೆದಿದ್ದವರ ಸಂಖ್ಯೆ ೫೦೦,೦೦೦ ಇತ್ತಂತೆ!

ಪರಿಷತ್ತಿನ ದಿನ ಬೆಳಿಗ್ಗೆ ಹರ್ಷನೂ ಭಾಸ್ಕರವರ್ಮನೂ ತಾವು ತಂಗಿದ್ದ ಸ್ಥಳದಿಂದ ತಮ್ಮ ಅಖಂಡಸೇನೆಯೊಡನೆ ಹಡಗುಗಳಲ್ಲಿ ಹೊರಟರು. ಧ್ರುವಭಟ್ಟನೂ ತನ್ನ ಪರಿವಾರದೊಡನೆ ಆನೆಗಳ ಮೇಲೆ ಹೊರಟನು. ಮಿಕ್ಕ ಹದಿನೆಂಟು ದೊರೆಗಳು ಉಚಿತವಾದ ರೀತಿಯಲ್ಲಿ ತಾವೂ ಪ್ರಯಾಣಬೆಳಸಿದರು. ಹೀಗೆ ಮಹಾಸಂಭ್ರಮದಿಂದ ಹೊರಟು ಎಲ್ಲರೂ ದಾನಭೂಮಿಯನ್ನು ಸೇರಿದರು.

ಮೋಕ್ಷಪರಿಷತ್ತು ಮೊದಲಾಯಿತು. ಆ ದಿನ ಬುದ್ಧದೇವನ ಮೂರ್ತಿಯನ್ನು ಸ್ಥಾಪಿಸಿದರು. ದೊರೆಯು ಅನರ್ಘ್ಯವಾದ ಅನೇಕ ವಸ್ತುಗಳನ್ನೂ ವಸ್ತ್ರಗಳನ್ನೂ ದಾನಮಾಡಿದನು.

ಎರಡನೆಯ ದಿವಸ ಆದಿತ್ಯದೇವನ ಮೂರ್ತಿಯನ್ನು ಸ್ಥಾಪಿಸಿದರು. ಹಿಂದಿನ ದಿನ ಕೊಟ್ಟುದರಲ್ಲಿ ಅರ್ಧದಷ್ಟನ್ನು ಹರ್ಷನು ಆ ದಿನ ದಾನಕೊಟ್ಟನು.

ಮೂರನೆಯ ದಿವಸ ಈಶ್ವರದೇವನ ಮೂರ್ತಿಯನ್ನು ಸ್ಥಾಪಿಸಿ, ಹರ್ಷನು ಹಿಂದಿನ ಹಗಲಿನಂತೆಯೇ ದಾನಮಾಡಿದನು.

ನಾಲ್ಕನೆಯ ದಿವಸ ಹತ್ತು ಸಾವಿರ ಭಿಕ್ಷುಗಳನ್ನು ನೂರು ಸಾಲಾಗಿ ಕುಳ್ಳಿರಿಸಿ, ಹರ್ಷನು ಪ್ರತಿಯೊಬ್ಬನಿಗೂ ನೂರು ಚಿನ್ನದ ನಾಣ್ಯಗಳು, ಒಂದು ಆಣಿಮುತ್ತು, ಒಂದು ಹತ್ತಿಯ ವಸ್ತ್ರ—ಇವುಗಳನ್ನು ಕೊಟ್ಟನು; ಅವರಿಗೆ ಬೇಕಾದ ಊಟ ಉಪಚಾರಗಳನ್ನೂ ಮಾಡಿಸಿದನು.

ಮುಂದೆ, ಬ್ರಾಹ್ಮಣರಿಗೆ ಬೇಡಿಬೇಡಿದುದನ್ನು ನೀಡುವುದರಲ್ಲಿ ಇಪ್ಪತ್ತು ದಿನ ಕಳೆಯಿತು.

ಅನಂತರ, ಇತರ ಧರ್ಮಾನುಯಾಯಿಗಳ ಪ್ರಾರ್ಥನೆಗಳನ್ನು ಪೂರೈಸಲು ಹತ್ತು ದಿವಸ ಹಿಡಿಯಿತು.

ಆ ಮೇಲೆ ಹತ್ತು ದಿವಸ, ದೂರದೇಶಗಳಿಂದ ದಾನ ಬೇಡುವುದಕ್ಕಾಗಿ ಬಂದವರನ್ನು ತೃಪ್ತಿಪಡಿಸುವುದರಲ್ಲಿ ಮುಗಿಯಿತು.

ಕಡೆಗೆ ಬಡವರು, ದೀನರು, ಅನಾಥರು ಮೊದಲಾಗಿ ಉಳಿದವರಿಗೆ ದಾನ ಕೊಡುತ್ತ ಒಂದು ತಿಂಗಳಾಯಿತು.

ಆ ವೇಳೆಗೆ, ಮೋಕ್ಷಪರಿಷತ್ತು ನಡೆಯಬೇಕಾಗಿದ್ದ ಎಪ್ಪತ್ತೈದು ದಿನಗಳು ಮುಗಿದುವು. ಜೊತೆಯಲ್ಲಿಯೇ, ಹರ್ಷನು ಐದು ವರುಷಗಳಿಂದ ಕೂಡಿಟ್ಟಿದ್ದ ಸರ್ವಸಂಪತ್ತೂ ಮುಗಿಯಿತು. ರಾಜ್ಯದ ಕ್ಷೇಮವನ್ನು ಕಾಯುವುದಕ್ಕಾಗಿ ಬೇಕೇಬೇಕಾದ ಆನೆ, ಕುದುರೆ, ಸೈನಿಕರ ಸಾಮಾನುಗಳು ಹೊರತಾಗಿ ಮಿಕ್ಕುದೆಲ್ಲವೂ ಮಾಯವಾಗಿತ್ತು. ದೊರೆಯು ತನ್ನ ಮೈಮೇಲಿನ ವಸ್ತ್ರಾಭರಣಗಳನ್ನು ಕೂಡ ದಾನಮಾಡಿಬಿಟ್ಟನು. ಹೀಗೆ ಹರ್ಷನು ತನ್ನ ಸರ್ವಸ್ವವನ್ನೂ ಇತರರಿಗೆ ಬಿಟ್ಟುಕೊಡುತ್ತಿದ್ದುದರಿಂದ ಆ ಪರಿಷತ್ತಿಗೆ ‘‘ಮೋಕ್ಷ ಪರಿಷತ್ತು’’ ಎಂದು ಹೆಸರು ಬಂದಿತ್ತು. ಹರ್ಷನು ಈ ರೀತಿಯಲ್ಲಿ ಅನನ್ಯಸಾಮಾನ್ಯವಾದ ದಾನಕರ್ಮವನ್ನು ನಡೆಸಿದನು; ಕಡೆಗೆ ಮಾಸಿದ ಬಟ್ಟೆಯೊಂದನ್ನು ರಾಜ್ಯಶ್ರೀಯಿಂದ ಬೇಡಿ ಪಡೆದು ಮೈ ಮುಚ್ಚಿಕೊಂಡನು.

ಆಗ ಪರಿಷತ್ತಿಗೆ ಬಂದಿದ್ದ ಇಪ್ಪತ್ತು ದೊರೆಗಳು, ಹರ್ಷನು ದಾನ ಮಾಡಿದ್ದ ರಾಜಚಿಹ್ನೆಗಳಾದ ಕಿರೀಟ ಮುಕ್ತಾಹಾರ ಮುಂತಾದವನ್ನೆಲ್ಲ ಕೇಳಿದಷ್ಟು ಹಣ ಕೊಟ್ಟು ಬಿಡಿಸಿಕೊಂಡು, ಅವುಗಳನ್ನು ತಮ್ಮ ಅಧಿರಾಜನಾದ ಹರ್ಷನಿಗೇ ಒಪ್ಪಿಸಿದರು.

ಅಲ್ಲಿಗೆ ಹರ್ಷನ ಮೋಕ್ಷ ಪರಿಷತ್ತು ಮುಗಿಯಿತು.

## ಅಲ್ಲಿಂದ ಮುಂದೆ

ಹರ್ಷನ ಇಷ್ಟದಂತೆ ಹುಯೆನ್‌ತ್ಸಾಂಗನು ತನ್ನ ಚೀನಾ ಪ್ರಯಾಣವನ್ನು ನಿಲ್ಲಿಸಿ ಮೋಕ್ಷಪರಿಷತ್ತಿಗೆ ಹೋದನಷ್ಟೆ. ಮೋಕ್ಷಪರಿಷತ್ತೂ ಮುಗಿಯಿತು; ಇನ್ನು ಚೀನಕ್ಕೆ ಹೊರಡಬಹುದೆಂಬ ಇಚ್ಛೆಯನ್ನು ಅವನು ದೊರೆಯಲ್ಲಿ ವ್ಯಕ್ತಪಡಿಸಿದನು. ಅದಕ್ಕೆ ಹರ್ಷನು "ನಿಮ್ಮಂತೆಯೇ ನಾನೂ ಬುದ್ಧನ ಧರ್ಮವನ್ನು ಪ್ರಚಾರಮಾಡಲು ಯತ್ನಿಸುತ್ತಿರುವೆನು. ನೀವು ಇಷ್ಟು ಬೇಗ ನನ್ನನ್ನು ಬಿಟ್ಟು ಹೋಗಬೇಕೆ?" ಎಂದು ನೊಂದು ಕೇಳಿದನು. ಭಾಸ್ಕರವರ್ಮನು ಕೂಡ ಅವನನ್ನು ಕಳುಹಿಸಿಕೊಡಲಾರದೆ "ತಾವು ನನ್ನ ರಾಜ್ಯಕ್ಕೆ ಬಂದು ನನ್ನ ಆತಿಥ್ಯವನ್ನು ಸ್ವೀಕರಿಸಿರಿ. ಅಲ್ಲಿ ಒಂದು ನೂರು ಸಂಘಾರಾಮಗಳನ್ನು ಸ್ಥಾಪಿಸುವೆನು" ಎಂದನು.

ತನ್ನನ್ನು ಬಿಟ್ಟು ಕಳುಹಿಸಲು ಅವರಿಗೆ ಮನಸ್ಸಿಲ್ಲವೆಂದು ಹುಯೆನ್‌ತ್ಸಾಂಗನಿಗೆ ತಿಳಿಯಿತು. ಧರ್ಮದಲ್ಲಿ ಅವರಿಗಿದ್ದ ಶ್ರದ್ಧೆಯನ್ನೂ ತನ್ನ ಮೇಲೆ ಅವರು ತೋರಿದ ವಿಶ್ವಾಸವನ್ನೂ ಗಮನಿಸಿ, ಹುಯೆನ್‌ತ್ಸಾಂಗನು ಆನಂದಬಾಷ್ಪಗಳನ್ನು ಸುರಿಸುತ್ತ "ಚೀನವು ಇಲ್ಲಿಗೆ ಬಹು ದೂರದಲ್ಲಿದೆ. ಚೀನವು ಬುದ್ಧನ ಧರ್ಮವನ್ನು ತಿಳಿದು ಬಹಳ ಕಾಲವಾಗಿಲ್ಲ. ಅದರಿಂದ ಚೀನವು ಆ ಧರ್ಮವನ್ನು ಸಂಪೂರ್ಣವಾಗಿ ತಿಳಿದಿಲ್ಲ. ನಾನು ಧರ್ಮವನ್ನು ಕಲಿತು ಅದರ ನಿಜಸ್ಥಿತಿಯನ್ನು ಚೀನದವರಿಗೆ ಕಲಿಸಬೇಕೆಂದು ಇಲ್ಲಿಗೆ ಬಂದವನು. ಧರ್ಮವನ್ನು ತಿಳಿದೂ ಅದನ್ನು ಇತರರಿಗೆ ತಿಳಿಸದಿದ್ದವರು ಮುಂದಿನ ಜನ್ಮದಲ್ಲಿ ಕುರುಡರಾಗಿ ಹುಟ್ಟುವರೆಂದು ಹಿರಿಯರು ಹೇಳುವರು. ಅದರಿಂದ ನಾನು ಚೀನಕ್ಕೆ ಹೋಗದೆ ಇಲ್ಲಿ

ನಿಲ್ಲಲಾರೆ. ನೀನು ಕೂಡ ನನ್ನನ್ನು ಕಳುಹಿಸದೆ ಹೀಗೆ ತಡೆಯುವುದು ತಕ್ಕುದಲ್ಲ'' ಎಂದನು.

ಕಡೆಗೆ ಹುಯೆನ್‌ತ್ಸಾಂಗನನ್ನು ಕಳುಹಿಸಲು ಹರ್ಷನು ಒಪ್ಪಿದನು. ಹುಯೆನ್‌ತ್ಸಾಂಗನು ದೊರೆಯ ಮಾತನ್ನು ಮೀರಬಾರದೆಂದು ಮತ್ತೂ ಹತ್ತು ದಿವಸಗಳನ್ನು ಅವನ ಸಹವಾಸದಲ್ಲಿ ಕಳೆದು, ಅನಂತರ ಚೀನಾ ದೇಶಕ್ಕೆ ಹಿಂದಿರುಗಿದನು.

ಹುಯೆನ್‌ತ್ಸಾಂಗನು ಹೊರಟಮೇಲೆ ಹರ್ಷನು ಏನೇನು ಮಾಡಿದ ನೆಂಬುದು ತಿಳಿದುಬಂದಿಲ್ಲ. ಹರ್ಷನ ಜೀವಮಾನದಲ್ಲಿ ನಾವು ತಿಳಿಯ ಬಹುದಾದ ಕಡೆಯ ಸಂಗತಿಯೆಂದರೆ—ಆತನು ಹುಯೆನ್‌ತ್ಸಾಂಗನನ್ನು ಚೀನಕ್ಕೆ ಕಳುಹಿಸಿಕೊಟ್ಟುದೇ. ಅದಾದನಂತರ ಹರ್ಷನು ನಾಲ್ಕು ವರ್ಷ ಮಾತ್ರ ರಾಜ್ಯವಾಳಿ ಮೃತನಾದನು.

## ಕೆಲವು ಇಸವಿಗಳು

ಮಹಾರಾಜಾಧಿರಾಜ ಶ್ರೀ ಹರ್ಷನನ್ನು ಇದುವರೆಗೆ ಕಂಡು, ಆತನ ಕಾಲದ ಹಿಂದೂದೇಶವನ್ನು ಕಾಣಲು ಹೋಗುವ ಮುಂಚೆ, ಆತನ ಜೀವನದಲ್ಲಿನ ಮುಖ್ಯ ಸಂಗತಿಗಳು ಯಾವಾಗ ನಡೆದುವೆಂದು ಕೆಲವು ಇಸವಿಗಳನ್ನು ತಿಳಿಯೋಣ :

ಕ್ರಿ. ಶ. ೫೮೩-೬೦೬—ಪ್ರಭಾಕರವರ್ಧನನ ರಾಜ್ಯಭಾರ.
ಕ್ರಿ. ಶ. ೫೮೬ —ರಾಜ್ಯವರ್ಧನನ ಜನನ.
ಕ್ರಿ. ಶ. ೫೯೦ —ಹರ್ಷನ ಜನನ.
ಕ್ರಿ. ಶ. ೫೯೩ —ರಾಜ್ಯಶ್ರೀಯ ಜನನ.
ಕ್ರಿ. ಶ. ೬೦೫-೬೦೬—ರಾಜ್ಯವರ್ಧನನು ಹೂಣರ ಮೇಲೆ ಹೋದುದು; ಪ್ರಭಾಕರವರ್ಧನನ ರೋಗ, ಸಾವು; ಗ್ರಹವರ್ಮನ ಮರಣ, ರಾಜ್ಯಶ್ರೀ ಬಂಧನ; ರಾಜ್ಯವರ್ಧನನು ಮಾಳವದ ಮೇಲೆ ಹೋದುದು, ಶಶಾಂಕನಿಂದ ವಧೆಯಾದುದು.

ಕ್ರಿ. ಶ. ೬೦೬ —ಹರ್ಷನು ರಾಜನಾದುದು.

ಕ್ರಿ. ಶ. ೬೦೬-೬೧೨—ರಾಜ್ಯಶ್ರೀ ಪ್ರಾಪ್ತಿ ; ಹರ್ಷನ ದಿಗ್ವಿಜಯ.

ಕ್ರಿ. ಶ. ೬೧೨ —ಪುಲಕೇಶಿಯೊಡನೆ ಯುದ್ಧ, ಹರ್ಷನ ಪರಾಭವ.

ಕ್ರಿ. ಶ. ೬೨೯ —ಹುಯೆನ್‌ತ್ಸಾಂಗನು ಹಿಂದೂದೇಶಕ್ಕೆ ಬಂದುದು.

ಕ್ರಿ. ಶ. ೬೪೧ —ಹರ್ಷನು ಚೀನಾದೇಶಕ್ಕೆ ರಾಯಭಾರ ಕಳುಹಿಸಿದುದು.

ಕ್ರಿ. ಶ. ೬೪೩ —ಹರ್ಷನು ಕೊಂಗ್ಯೋಧವನ್ನು ಜಯಿಸಿದುದು ; ಹುಯೆನ್‌ತ್ಸಾಂಗನನ್ನು ಕರೆಸಿಕೊಂಡುದು.

ಕ್ರಿ. ಶ. ೬೪೪ —ಹರ್ಷನು ಧರ್ಮಸಭೆಯನ್ನೂ ಆರನೆಯ ಮೋಕ್ಷಪರಿಷತ್ತನ್ನೂ ನಡೆಸಿ, ಹುಯೆನ್‌ತ್ಸಾಂಗನನ್ನು ಚೀನಕ್ಕೆ ಕಳುಹಿಸಿಕೊಟ್ಟುದು.

ಕ್ರಿ. ಶ. ೬೪೮ —ಮಹಾರಾಜಾಧಿರಾಜ ಶ್ರೀ ಹರ್ಷನ ಮರಣ.



# ಹರ್ಷನ ಕಾಲದ ಹಿಂದೂದೇಶ

## ಇದು ಏಕೆ?

ಒಂದು ಮನೆ ಇದೆ. ಆ ಮನೆಯ ಯಜಮಾನನಿಗೆ ಮದುವೆಯಾಗಿ ಮನೆತುಂಬ ಮಕ್ಕಳು ಮರಿ ಇದ್ದಾರೆ. ಆ ಮಕ್ಕಳಲ್ಲಿ ಕೆಲವರು ಓದುತ್ತಾರೆ, ಕೆಲವರು ಹಾಡುತ್ತಾರೆ, ಚಿತ್ರ ಬರೆಯುತ್ತಾರೆ, ಕಸೂತಿ ಹಾಕುತ್ತಾರೆ; ಹೀಗೆ ಒಬ್ಬೊಬ್ಬರು ಒಂದೊಂದು ವಿದ್ಯೆ ಕಲಿತು ಎಲ್ಲರೂ ಜಾಣರಾಗಿದ್ದಾರೆ. ಆ ಮನೆಯವರು ಎಲ್ಲರೂ ಒಬ್ಬರನ್ನೊಬ್ಬರು ಪ್ರೀತಿ ವಿಶ್ವಾಸಗಳಿಂದ ನೋಡುತ್ತಾರೆ; ಜಗಳವಿಲ್ಲದೆ ಸಂತೋಷವಾಗಿದ್ದಾರೆ. ಮನೆಯ ಒಳಹೊಕ್ಕು ನೋಡಿದರೆ ಅಲ್ಲಿಯ ಚೊಕ್ಕಟದಿಂದ ಮನಸ್ಸಿಗೆ ಹರ್ಷವಾಗುತ್ತದೆ. ಮನೆಗೆ ಬಂದವರನ್ನು ಮನೆಯವರು ನಗುನಗುತ್ತ ಮಾತನಾಡಿಸುತ್ತಾರೆ. ಇಂತಹ ಮನೆಯನ್ನು ನೋಡಿದರೆ, ''ಈ ಮನೆಯ ಯಜಮಾನನು ಸಂಸಾರ ಮಾಡಿಕೊಂಡುದು ಸಾರ್ಥಕವಾಗಿದೆ" ಎನ್ನಿಸುತ್ತದೆ.

ಆ ಯಜಮಾನನಿಗೆ ಅವನ ಮನೆ ಹೇಗೋ, ರಾಜನಿಗೆ ಅವನ ರಾಜ್ಯ ಹಾಗೆ. ಆ ರಾಜ್ಯದಲ್ಲಿ ನಡೆದು, ಅಲ್ಲಿಯ ವಿದ್ಯಾಭ್ಯಾಸ ಹೇಗಿದೆ, ಜನರು ಎಂತಹ ವೇಷಭೂಷಣಗಳನ್ನು ಉಪಯೋಗಿಸುವರು, ರಾಜ್ಯದ ಪಟ್ಟಣಗಳೂ ಗ್ರಾಮಗಳೂ ಯಾವ ಸ್ಥಿತಿಯಲ್ಲಿವೆ, ಅಲ್ಲಿಯ ಪ್ರಜೆಗಳು ಹೇಗೆ ವಾಸಿಸುತ್ತಾರೆ, ಅವರಿಗೆ ತಿಳಿದಿರುವ ಕೆಲಸಗಳೇನೇನು—ಎಂದು ಮೊದಲಾದ ವಿಷಯಗಳನ್ನು ತಿಳಿದರೆ, ಅದರಿಂದ ಆ ರಾಜ್ಯದ ಅರಸನ ಕರ್ತವ್ಯಪಾಲನೆಯನ್ನೂ ರಾಜ್ಯಪಾಲನಾ ಶಕ್ತಿಯನ್ನೂ ಅಳೆಯಬಹುದು. ರಾಜ್ಯದ ಪ್ರಜೆಗಳು ಉತ್ತಮರಾಗಲಿ ಅಧಮರಾಗಲಿ, ಅದಕ್ಕೆ ರಾಜನೇ ಹೊಣೆ. ಪ್ರಜೆಗಳ ಉನ್ನತಿ ಅವನತಿಗಳು ದೊರೆಯ ನಡತೆಯ ಮೇಲೆ ನಿಲ್ಲುತ್ತವೆ.

ಈ ಮಾನದಂಡವನ್ನು, ಎಂದರೆ ಅಳತೆಯ ಕಡ್ಡಿಯನ್ನು ಹಿಡಿದು, ಹರ್ಷನ ಕಾಲದ ಹಿಂದೂದೇಶವನ್ನು ಬಳಸಿ ಬಂದರೆ, ಹಿಂದೂದೇಶದ ಇತಿಹಾಸದಲ್ಲಿ ಹರ್ಷನ ರಾಜ್ಯಭಾರವು ಅಮೋಘವಾದುದೆಂದು ತಿಳಿದು ಬರುವುದು.

## ಆ ಕಾಲದ ವಿದ್ಯಾವೈಭವ

ಹರ್ಷನು ತನ್ನ ಹದಿನಾರನೆಯ ವಯಸ್ಸಿನಲ್ಲಿ ದೊರೆಯಾದುದು, ಅಂದಿನಿಂದ ಆರು ವರುಷ ಪರಾಕ್ರಮದಿಂದ ಕಾದಾಡಿ ರಾಜ್ಯವನ್ನು ವಿಸ್ತರಿಸಿದುದು, ಅನಂತರ ಸುಮಾರು ಮೂವತ್ತು ವರುಷ ಶಾಂತಿಯಿಂದ ರಾಜ್ಯವಾಳಿ ಗೆದ್ದ ರಾಜ್ಯವನ್ನು ಬಲಪಡಿಸಿದುದು—ಇವನ್ನೆಲ್ಲ ಹಿಂದೆ ವಿವರಿಸಿದೆ. ಆ ಮೂವತ್ತು ವರುಷಗಳ ಮಧ್ಯದಲ್ಲಿಯೆ ಹುಯೆನ್‌ತ್ಸಾಂಗನು ಹಿಂದೂದೇಶಕ್ಕೆ ಬಂದುದು. ಅವನು ಬರುವ ವೇಳೆಗೆ ಹರ್ಷನು ಯುದ್ಧ ನಿಲ್ಲಿಸಿ ಹದಿನೇಳು ವರ್ಷವಾಗಿತ್ತು. ಹರ್ಷನು ಸಾಯುವುದಕ್ಕೆ ನಾಲ್ಕು ವರ್ಷ ಮುಂಚೆ ಅವನು ಹಿಂದೂದೇಶವನ್ನು ಬಿಟ್ಟು ಹೋದುದು. ಹೀಗೆ ಸುಮಾರು ಹದಿನೈದು ವರುಷಗಳು ಹಿಂದೂದೇಶದಲ್ಲಿ ತಿರುಗಾಡಿ, ಹುಯೆನ್‌ತ್ಸಾಂಗನು ಅದನ್ನು ಕರತಲಾಮಲಕದಂತೆ ತಿಳಿದಿದ್ದನು. ಆ ತನ್ನ ಜ್ಞಾನವನ್ನು ತನ್ನ ಪುಸ್ತಕದಲ್ಲಿ ಬರೆದಿರುವನು.

ಹುಯೆನ್‌ತ್ಸಾಂಗನು ಹಿಂದೂದೇಶಕ್ಕೆ ಬಂದುದು ಆ ದೇಶದ ಬೆಟ್ಟ ನದಿ ಮುಂತಾದ ಸುಂದರ ದೃಶ್ಯಗಳನ್ನು ನೋಡುವುದಕ್ಕಲ್ಲ ; ಆ ದೇಶದ ದೊರೆಗಳಿಂದ ಬಹುಮಾನ ಪಡೆಯುವುದಕ್ಕಲ್ಲ; ಹಾಯಾಗಿ ಕಾಲ ಕಳೆದು ಹೋಗುವುದಕ್ಕಲ್ಲ. ಅವನು ಬಂದುದು ಮುಖ್ಯವಾಗಿ ಜ್ಞಾನಾರ್ಜನೆಗೆ ! ಹುಯೆನ್‌ತ್ಸಾಂಗನು ಚೀನಾದೇಶದಿಂದ ಬಂದವನೆಂಬುದನ್ನು ಮರೆಯ ಬಾರದು. ಚೀನಾದೇಶವು ಹಿಂದೂದೇಶಕ್ಕೆ ಹತ್ತಿರವಲ್ಲ, ದೂರವೆಂಬುದು ಯಾವ ಭೂಪಟ ನೋಡಿದರೂ ತಿಳಿಯುವುದು. ದೂರದ ಮಾತು ಹಾಗಿರಲಿ ; ಚೀನದಿಂದ ಹಿಂದೂದೇಶಕ್ಕೆ ಬರಲು ಬೇರೆ ಅಡ್ಡಿಗಳನ್ನು ದಾಟಬೇಕಾಗಿತ್ತು. ಚೀನಾದೇಶದ ಸುತ್ತ ಕಾವಲು ಕಟ್ಟಿದಂತೆ ಬೆಟ್ಟಗಳು, ನದಿಗಳು, ಮರುಭೂಮಿಗಳು! ಉತ್ತರದಲ್ಲಿ ಮಂಚೂರಿಯದ ವಿಶಾಲವಾದ

ವೈದಾನವನ್ನು ಹಾಯುವುದು ಬಾಯಿಮಾತಲ್ಲ! ವಾಯುವ್ಯದಲ್ಲಿ ಆಲ್ಟೈ ಪರ್ವತಶ್ರೇಣಿ! ಅದಕ್ಕೂ ಚೀನಕ್ಕೂ ನಡುವೆ ಮಹಾ ಮರುಭೂಮಿ! ಪಶ್ಚಿಮಕ್ಕೆ ಅಪಾಯ ಶತಕೋಟಿಗಳನ್ನು ಹೊತ್ತ ಮಧ್ಯಏಷ್ಯದ ಥ್ಯೈಯರ್ಷಾರ್ ಮತ್ತು ಪಾಮಿರ್ ಬೆಟ್ಟಗಳು! ಅವುಗಳನ್ನು ದಾಟಿದರೆ, ಕಡೆಗಾಣದ ಗೋಬಿ ಮರುಭೂಮಿ! ಅದನ್ನೂ ಹಾಯ್ದರೆ, ಅಲಾಷಾರ್ ಇನ್‌ಷಾರ್ ಎಂಬ ದೊಡ್ಡ ಬೆಟ್ಟಗಳ ಕಡಿದಾದ ಗೋಡೆಗಳು! ನೈಋತ್ಯದಲ್ಲಿ, ಪಾಮಿರಿನೊಡನೆ ಹೆಣೆದುಕೊಂಡು ಮಹಾಪರ್ವತವೆನಿಸಿದ ಹಿಮಗಿರಿಯಲ್ಲಿ ಕೊನೆಗಾಣುವ ಹನ್ನೆರಡು ಸಾವಿರ ಅಡಿಯೆತ್ತರದ ಟಿಬೆಟ್ ಪ್ರಸ್ಥಭೂಮಿ! ಚೀನದ ದಕ್ಷಿಣಕ್ಕೆ ಹೆಗ್ಗಾಡುಗಳು, ಕಣಿವೆಗಳು, ಬರ್ಮ ಮತ್ತು ಟಾರ್ಕ್ವಿನ್ನಿನ ರಭಸವಾದ ನದಿಗಳು! ಚೀನದ ಪೂರ್ವಕ್ಕೆ ಅಗಾಧವಾದ ಸಮುದ್ರ! ಆ ಸಮುದ್ರವನ್ನು ದಾಟುವುದೆಂದರೆ ಮರಣಕ್ಕೆ ಮುತ್ತಿಕ್ಕಲು ಯತ್ನಿಸಿದಂತೆ!

ಹೀಗೆ, ಹೋಗಿಬರುವವರಿಗೆ ಎಲ್ಲ ಕಡೆಗಳಿಂದಲೂ ಕಷ್ಟಸಾಧ್ಯವಾದ ಚೀನಾದೇಶದಿಂದ ಭರತಭೂಮಿಗೆ ಬಂದವರಲ್ಲಿ ಹುಯೆನ್‌ತ್ಸಾಂಗನದೇ ಹಿರಿಯ ಹೆಸರು. ಅವನಿಗೆ ಮೂರು ಶತಮಾನಗಳ ಮುಂಚೆ ಫಾಹಿಯಾನ್ ಎಂಬವನು ಬಂದಿದ್ದನು. ಅವನನಂತರ ಸುಂಗ್–ಯುನ್ ಎಂಬವನು ಆಗಮಿಸಿದ್ದನು. ಅವರೆಲ್ಲರೂ ತಮ್ಮ ಸಂಚಾರದ ವಿವರಗಳನ್ನು ಬರೆದಿಟ್ಟುದರಿಂದ ಅವರ ಹೆಸರು ಪ್ರಸಿದ್ಧವಾಗಿದೆ. ಅವರಲ್ಲದೆ ಇನ್ನೂ ನೂರಾರು ಮಂದಿ ಚೀಣರು ಹಿಂದೂಸ್ಥಾನಕ್ಕೆ ಬಂದಿದ್ದರು; ಹನ್ನೊಂದನೆಯ ಶತಮಾನದವರೆಗೂ ಬರುತ್ತಲೇ ಇದ್ದರು. ದಾರಿಯ ಅಪಾಯಗಳನ್ನು ಲೆಕ್ಕಮಾಡದೆ ಅವರೆಲ್ಲರೂ ಹಿಂದೂದೇಶಕ್ಕೆ ಬಂದುದೇಕೆ? ಜ್ಞಾನ ಸಂಪಾದನೆಗೆ!

ಹೀಗೆ, ಆ ಕಾಲದಲ್ಲಿ ಹಿಂದೂದೇಶವು ಕೊಡಬಲ್ಲದಾದ ಜ್ಞಾನದಾನದ ಲಾಭವನ್ನು ಪಡೆಯಬೇಕೆಂದು ಬಂದವರು ಚೀಣರೊಬ್ಬರೇ ಅಲ್ಲ; ಅದೇ ಜ್ಞಾನಲಾಭಕ್ಕಾಗಿ ಜಪಾನ್, ಟಿಬೆಟ್, ಮಂಗೋಲಿಯ, ಅರಬಸ್ಥಾನಗಳಿಂದಲೂ ಪಂಡಿತರು ಇಲ್ಲಿಗೆ ಬರುತ್ತಿದ್ದರು. ಇದು ಸಾಕಷ್ಟು ಸಾಕ್ಷಿಯಾದರೆ, ಆ ಕಾಲದ ವಿದ್ಯಾವೈಭವವೇನಿರಬೇಕು!

## ಆಗಿನ ವಿದ್ಯಾಭ್ಯಾಸ ಕ್ರಮ

ಆ ಕಾಲದಲ್ಲಿ ಹಿಂದೂದೇಶದ ಭಾಷೆ ಸಂಸ್ಕೃತ; ಜನರು ಮಾತನಾಡಿ ಬರೆಯುತ್ತಿದ್ದುದು ಅದರಲ್ಲೆ. ಮಧ್ಯದೇಶದಲ್ಲಿ ಮಾತ್ರ ಸಂಸ್ಕೃತ ಶುದ್ಧವಾಗಿತ್ತು. ಅಲ್ಲಿಯ ಜನರು ಸ್ಪಷ್ಟವಾಗಿ ಮಾತನಾಡುವರು; ಅವರ ಮಾತಿನ ರೀತಿ ಮನೋಹರ, ಉಚ್ಚಾರಣೆ ಸ್ಪಷ್ಟ; ಅವರು ಮಿಕ್ಕವರಿಗೆ ಮಾದರಿ. ಮಧ್ಯ ಹಿಂದೂದೇಶದ ಹೊರಗಡೆಯ ಭಾಷೆ ಅಷ್ಟು ನಿರ್ಮಲವಲ್ಲ. ಅಲ್ಲಿಯವರು ಮೂಲವನ್ನು ಬದಲಾಯಿಸಿ, ತಪ್ಪು ತಪ್ಪಾಗಿ ಮಾತನಾಡಿ, ಕಡೆಗೆ ಅದೇ ನಿಂತುಹೋಗಿತ್ತು.

ವಿದ್ಯೆ ಕಲಿಯಬೇಕೆಂದು ಬಂದವರಿಗೆ ಉಪಾಧ್ಯಾಯರು ಮೊದಲು ಅಕ್ಷರಗಳನ್ನು ಕಲಿಸಿ, ಅನಂತರ 'ಸಿದ್ಧಿರಸ್ತು' ಎಂಬ ಮೊದಲನೆಯ ಪುಸ್ತಕವನ್ನು ಪ್ರಾರಂಭಿಸುತ್ತಿದ್ದರು. ಅನಂತರ ವ್ಯಾಕರಣವನ್ನು ಹೇಳಿಕೊಟ್ಟು, ಗದ್ಯ ಪದ್ಯ ಬರೆಯುವುದನ್ನು ಕಲಿಸುತ್ತಿದ್ದರು. ಅದು ಮುಗಿದ ಮೇಲೆ 'ವಿದ್ಯೆ'ಗಳ ವ್ಯಾಸಂಗ ಮೊದಲಾಗುತ್ತಿತ್ತು. ಆ ಕಾಲದಲ್ಲಿ ಕಲಿಸುತ್ತಿದ್ದ ವಿದ್ಯೆಗಳು ಐದು: (೧) ಶಬ್ದವಿದ್ಯೆ—ವ್ಯಾಕರಣವನ್ನು ಚೆನ್ನಾಗಿ ತಿಳಿದು, ಗದ್ಯದಲ್ಲಿಯೂ ಪದ್ಯದಲ್ಲಿಯೂ ಬರೆಯುವುದಕ್ಕೆ ಸಹಾಯವಾದುದು; (೨) ಶಿಲ್ಪಸ್ಥಾನವಿದ್ಯೆ—ಕಲೆ ಕೈಗಾರಿಕೆ ಮುಂತಾದ ಜೀವನೋಪಾಯಕ್ಕೆ ಸಹಾಯವಾಗುವ ವೃತ್ತಿಗಳನ್ನು ಕಲಿಸುವುದು; (೩) ಚಿಕಿತ್ಸಾ ವಿದ್ಯೆ—ವೈದ್ಯಶಾಸ್ತ್ರವನ್ನು ಕಲಿಸುವುದು; (೪) ಹೇತುವಿದ್ಯೆ—ಇದಕ್ಕೆ ನ್ಯಾಯ ಎನ್ನುತ್ತಾರೆ, ತರ್ಕವನ್ನು ಕಲಿಸುವುದು; ಮತ್ತು (೫) ಅಧ್ಯಾತ್ಮವಿದ್ಯೆ—ಷಡ್ದರ್ಶನಗಳನ್ನೂ ಇತರ ಸಿದ್ಧಾಂತಗಳನ್ನೂ ಕುರಿತ ಪಾಠಗಳು. ಆ ಐದು ವಿದ್ಯೆಗಳ ಪಾಠ ಮುಗಿದರೆ, ಸಾಮಾನ್ಯ ವಿದ್ಯಾಭ್ಯಾಸ ಮುಗಿದ ಹಾಗೆ. ಆ ವಿದ್ಯೆಗಳ ವ್ಯಾಸಂಗವು ಬ್ರಾಹ್ಮಣ ಬೌದ್ಧ ಜೈನ ಮುಂತಾದ ಮತಭೇದವಿಲ್ಲದೆ, ಎಲ್ಲರಿಗೂ ಒಂದೇ ಸಮನಾಗಿ ನಡೆಯುತ್ತಿತ್ತು.

ಈ ರೀತಿಯ ಸಾಮಾನ್ಯ ವಿದ್ಯಾಭ್ಯಾಸವನ್ನು ಮುಗಿಸಿದನಂತರ, ಮೇಧಾವಿಗಳಾದವರು ಪ್ರೌಢವಿದ್ಯಾಭ್ಯಾಸಕ್ಕೆ ಹೋಗುತ್ತಿದ್ದರು; ಯಾವು

ದಾದರೂ ಒಂದು ವಿಷಯವನ್ನು ಪ್ರಧಾನವಾಗಿ ತೆಗೆದುಕೊಂಡು, ಅದನ್ನು ಆಮೂಲಾಗ್ರವಾಗಿ ವ್ಯಾಸಂಗಮಾಡಿ, ಅದರಲ್ಲಿ ಪಂಡಿತರಾಗುತ್ತಿದ್ದರು. ಕೆಲವರು ವ್ಯಾಕರಣದಲ್ಲಿ ಪಂಡಿತರಾಗುವರು. ಬ್ರಾಹ್ಮಣರು ವೇದಗಳಲ್ಲಿಯೂ, ಬೌದ್ಧರೂ ಜೈನರೂ ತಮ್ಮ ತಮ್ಮ ಆಗಮಗಳಲ್ಲಿಯೂ ಪಾರಂಗತರಾಗುವರು. ಕೆಲವರು ಒಂದಕ್ಕಿಂತ ಹೆಚ್ಚು ವಿಷಯಗಳಲ್ಲಿ ಪರಿಣತರಾದುದೂ ಉಂಟು. ಪ್ರಭಾಕರವರ್ಧನನ ಆಸ್ಥಾನ ವೈದ್ಯರಲ್ಲೊಬ್ಬನಾದ ರಸಾಯನನು ಹದಿನೆಂಟು ವರುಷದವೇಳೆಗೆ ಆಯುರ್ವೇದದ ಅಷ್ಟಾಂಗಗಳಲ್ಲಿಯೂ ಪಂಡಿತನಾಗಿದ್ದನು. ಹುಯೆನ್‌ತ್ಸಾಂಗನು ಹಿಂದೂದೇಶಕ್ಕೆ ಬಂದಮೇಲೆ ಯೋಗಶಾಸ್ತ್ರದಲ್ಲಿ ಪಾರಂಗತನಾದನು. ಗುಣಭದ್ರನೆಂಬವನು, ಪಂಚವಿದ್ಯೆಗಳ ಜೊತೆಗೆ ಜ್ಯೋತಿಷ, ವೈದ್ಯ, ಗಣಿತ, ತಂತ್ರಗಳಲ್ಲಿ ಪಂಡಿತನಾಗಿದ್ದನು.

## ಆ ಕಾಲದ ವಿದ್ಯಾಪೀಠಗಳು

ಹೀಗೆ ವಿದ್ಯಾರ್ಥಿಗಳಿಗೆ ವಿದ್ಯಾದಾನ ಮಾಡುತ್ತಿದ್ದ ವಿದ್ಯಾಪೀಠಗಳು ಆ ಕಾಲದಲ್ಲಿ ಬಹಳವಾಗಿದ್ದವು. ಒಂದು ಕಡೆ ಬ್ರಾಹ್ಮಣರ ಗುರುಕುಲಗಳು, ಇನ್ನೊಂದು ಕಡೆ ಬೌದ್ಧರ ವಿಹಾರಗಳು; ಇವೇ ಆ ಕಾಲದ ವಿದ್ಯಾಪೀಠಗಳು. ಈ ತೆರದ ವಿದ್ಯಾಪೀಠಗಳಲ್ಲಿ ಹುಯೆನ್‌ತ್ಸಾಂಗನು ಒಬ್ಬನು ಕಂಡುದರ ಸಂಖ್ಯೆಯೇ ೫,೦೦೦; ಅಲ್ಲಿ ವ್ಯಾಸಂಗ ಮಾಡುತ್ತಿದ್ದವರ ಸಂಖ್ಯೆ ಎರಡು ಲಕ್ಷ. ಆ ಎಲ್ಲಾ ವಿದ್ಯಾಪೀಠಗಳೂ ಪ್ರಸಿದ್ಧವಾದುವಾದರೂ, ನಾಲಂದಾ ವಿದ್ಯಾಪೀಠವು ಅವುಗಳೆಲ್ಲವನ್ನೂ ಮೀರಿಸಿತ್ತು.

ಹುಯೆನ್‌ತ್ಸಾಂಗನು ಬಂದಾಗ, ನಾಲಂದದ ವಿದ್ಯಾರ್ಥಿಗಳ ಸಂಖ್ಯೆ ೧೦,೦೦೦. ತಮ್ಮ ಸಂದೇಹಗಳನ್ನು ನೀಗಿಕೊಂಡು ವಿದ್ವಾಂಸರಾಗಬೇಕೆಂದು ದೇಶದೇಶಾಂತರಗಳ ವಿದ್ಯಾರ್ಥಿಗಳು ಅಲ್ಲಿಗೆ ಬರುತ್ತಿದ್ದರು. ಕೆಲವರು ಮಂಗೋಲಿಯದಿಂದ ಕೂಡ ಬಂದಿದ್ದರಂತೆ! ಆ ವಿದ್ಯಾರ್ಥಿಗಳ ವಾಸಕ್ಕಾಗಿ ಆರು ವಿಹಾರಗಳಿದ್ದುವು. ಪ್ರತಿ ವಿಹಾರವೂ ಆರು ಅಂತಸ್ತಿನದು. ಆ ವಿದ್ಯಾಪೀಠವು ತನ್ನ ವಿದ್ಯಾರ್ಥಿಗಳ ವಾಸಸ್ಥಳವನ್ನು ಮಾತ್ರ

ವಲ್ಲ ; ಊಟ, ಬಟ್ಟೆ ಬರೆ, ಕಾಯಿಲೆಗೆ ಔಷಧಿ ಮೊದಲಾಗಿ ಬೇಕಾದು ದನ್ನೆಲ್ಲ ಉಚಿತವಾಗಿ ಒದಗಿಸುತ್ತಿತ್ತು. ನಾಲಂದದ ದೊರೆಯು ಆ ವಿದ್ಯಾಪೀಠದ ವೆಚ್ಚಕ್ಕಾಗಿ ನೂರು ಗ್ರಾಮುಗಳ ಹುಟ್ಟುವಳಿಯನ್ನು ಬಿಟ್ಟುಕೊಟ್ಟಿದ್ದನು !

ನಾಲಂದಾ ವಿದ್ಯಾಪೀಠವು ಬೌದ್ಧ ವಿದ್ಯಾಪೀಠವಾದರೂ ಅಲ್ಲಿ ಕಲಿಸುತ್ತಿದ್ದುದು ಬೌದ್ಧ ವಿದ್ಯೆಯೊಂದೇ ಅಲ್ಲ. ಬೌದ್ಧದರ್ಶನದ ನಾನಾ ಶಾಖೆಗಳಲ್ಲದೆ ವೇದಗಳು, ಷಡ್ದರ್ಶನಗಳು, ಜೈನದರ್ಶನ, ಜ್ಯೋತಿಷ, ಗಣಿತ, ವ್ಯಾಕರಣ, ವೈದ್ಯ ಮುಂತಾಗಿ ವಿದ್ಯೆಯ ವಿವಿಧ ಅಂಗಗಳನ್ನೂ ಅಲ್ಲಿ ಬೋಧಿಸುತ್ತಿದ್ದರು.

ಆ ವಿದ್ಯಾಪೀಠಕ್ಕೆ ಪ್ರವೇಶವು ಸುಲಭವಾಗಿ ಸಿಕ್ಕುತ್ತಿರಲಿಲ್ಲ. ತಮ್ಮ ಪ್ರೌಢ ವಿದ್ಯಾಭ್ಯಾಸವನ್ನು ಮುಂದುವರಿಸಬೇಕೆಂದವರು ಮಾತ್ರ ಅಲ್ಲಿಗೆ ಬರುತ್ತಿದ್ದರು ; ಅಲ್ಲಿ ಓನಾಮದಿಂದ ಆರಂಭಿಸುತ್ತಿರಲಿಲ್ಲ. ಅಲ್ಲಿಗೆ ಬಂದ ವಿದ್ಯಾರ್ಥಿಗಳು ಪರಸ್ಪರವಾಗಿ ಚರ್ಚೆ ನಡೆಸಿ, ತಮ್ಮ ಸಂದೇಹಗಳನ್ನು ಪರಿಹರಿಸಿಕೊಳ್ಳುತ್ತಿದ್ದರು, ಅದೇ ಅಲ್ಲಿಯ ವಿದ್ಯಾಭ್ಯಾಸದ ರೀತಿ. ಅದರಿಂದ, ಬಂದವನನ್ನು ಸೇರಿಸಿಕೊಳ್ಳುವ ಮೊದಲು, ಅವನಿಗೆ ವಿದ್ಯೆ ಸಾಕಾದಷ್ಟು ಇದೆಯೆ? ಅವನು ವಾದ ನಡೆಸಬಲ್ಲನೆ? ಎಂದು ಆ ವಿದ್ಯಾಪೀಠದವರು ಪರೀಕ್ಷಿಸುತ್ತಿದ್ದರು. ಹೀಗೆ ಪರೀಕ್ಷಿಸುವುದರ ಫಲವಾಗಿ, ಹತ್ತು ಜನ ಸೇರಬೇಕೆಂದು ಬಂದರೆ ಇಬ್ಬರಿಗೋ ಮೂವರಿಗೋ ಪ್ರವೇಶ ದೊರಕುತ್ತಿತ್ತು.

ಹೀಗೆ ಆ ವಿದ್ಯಾಪೀಠದ ಪ್ರವೇಶವು ಅಷ್ಟು ದುಷ್ಕರವಾಗಿರುವಾಗಲೇ ಅಲ್ಲಿಯ ಸಂಖ್ಯೆ ಹತ್ತುಸಾವಿರವೆಂದರೆ, ಪಂಚವಿದ್ಯೆಗಳನ್ನು ಕಲಿತು ಸಾಮಾನ್ಯ ವಿದ್ಯಾಭ್ಯಾಸವನ್ನು ಮುಗಿಸಿದವರ ಸಂಖ್ಯೆ ಎಷ್ಟಿದ್ದಿರಬೇಕು ! ದೇಶದಲ್ಲಿನ ವಿದ್ಯಾಭ್ಯಾಸ ಎಷ್ಟು ಮುಂದುವರಿದಿರಬೇಕು !

## ವಿದ್ಯಾಭಿವೃದ್ಧಿಗೆ ಕಾರಣಗಳು

ಆ ಕಾಲದಲ್ಲಿ ವಿದ್ಯೆಗೆ ಇದ್ದ ಪ್ರಾಶಸ್ತ್ಯವನ್ನೂ ವಿದ್ಯೆ ಕಲಿಯುವುದಕ್ಕೆ ಇದ್ದ ಉತ್ಸಾಹವನ್ನೂ ಕಂಡು ಆಶ್ಚರ್ಯಪಡಬೇಕಾಗಿಲ್ಲ. ಏಕೆಂದರೆ

ಚಕ್ರವರ್ತಿಯಾದ ಹರ್ಷನೇನು ಸಾಮಾನ್ಯನೇ? ಅವನು ಸ್ವತಃ ವಿದ್ವಾಂಸ. ರತ್ನಾವಳೀ, ಪ್ರಿಯದರ್ಶಿಕಾ, ನಾಗಾನಂದ ಎಂಬ ಮೂರು ನಾಟಕಗಳನ್ನು ಆತನು ರಚಿಸಿದನು. ಅದಲ್ಲದೆ 'ಸುಪ್ರಭಾತಸ್ತೋತ್ರ', ಅಷ್ಟ ಮಹಾ ಶ್ರೀ ಚೈತ್ಯ ಸಂಸ್ಕೃತ ಸ್ತೋತ್ರ' ಎಂಬ ಎರಡು ಕವಿತೆಗಳನ್ನೂ ಆತನು ರಚಿಸಿದನಂತೆ. ಇತರ ಕೆಲವು ಸಂಸ್ಕೃತ ಕವಿಗಳು ಅವನನ್ನು ಹೊಗಳಿದ್ದಾರೆ. ಜಯದೇವನೆಂಬವನು ಹರ್ಷನನ್ನೂ ಕಾಳಿದಾಸನನ್ನೂ ಒಂದೇ ಉಸುರಿನಲ್ಲಿ ಕೀರ್ತಿಸಿದ್ದಾನೆ. ಹರ್ಷನ ಕವಿತಾ ಸಾಮರ್ಥ್ಯವನ್ನು ಬಾಣನು ಹೊಗಳಿರುವನು. ಇನ್ನೊಬ್ಬ ಕವಿಯು, ಕಾವ್ಯವನಿತೆಗೆ ಹರ್ಷನನ್ನು ಕಂಡರೆ ಹರ್ಷವೆಂದು ನುಡಿದಿದ್ದಾನೆ. ಇಂತಹ ವಿದ್ವಾಂಸನಾದ ಮಹಾನುಭಾವನು ವಿದ್ಯಾಭಿಮಾನಿಯಾಗಿದ್ದುದು ಸಹಜ ತಾನೆ!

ಹರ್ಷನು ತನ್ನ ವಿದ್ಯಾಭಿಮಾನವನ್ನು ಎರಡು ತೆರನಾಗಿ ಪ್ರಕಟಗೊಳಿಸಿ, ವಿದ್ಯಾಭ್ಯಾಸಕ್ಕೆ ಉತ್ತೇಜನ ಕೊಡುತ್ತಿದ್ದನು. ಮೊದಲನೆಯದಾಗಿ ಅವನು ವಿದ್ಯಾವಂತರನ್ನು ಮಾನಿಸುತ್ತಿದ್ದನು; ಎರಡನೆಯದಾಗಿ ವಿದ್ಯಾಸಂಸ್ಥೆಗಳಿಗೆ ಸಹಾಯ ನೀಡುತ್ತಿದ್ದನು.

ಹರ್ಷನಿಗೆ ಭೂಮಿಯಿಂದ ಬರುತ್ತಿದ್ದ ರಾಜಾದಾಯದಲ್ಲಿ ನಾಲ್ಕನೆಯ ಒಂದು ಪಾಲು ಪ್ರಸಿದ್ಧರಾದ ವಿದ್ವಾಂಸರನ್ನು ಗೌರವಿಸಲು ವಿನಿಯೋಗವಾಗುತ್ತಿತ್ತೆಂದು ಹಿಂದೆಯೇ ಹೇಳಿದೆ. ಅವನು ಹುಯೆನ್‌ತ್ಸಾಂಗನನ್ನು ತನ್ನ ಬಳಿಗೆ ಕರೆಸಿಕೊಂಡು ಪುರಸ್ಕರಿಸಿದುದು ಏಕೆ? ಅವನ ವಿದ್ವತ್ತಿಗೆ ಮೆಚ್ಚಿಯಲ್ಲವೆ? ಇದಲ್ಲದೆ, ಜಯಸೇನನೆಂಬ ವಿದ್ವಾಂಸನ ಪ್ರತಿಭೆಗೆ ಮೆಚ್ಚಿ, ಹರ್ಷನು ಒರಿಸ್ಸಾದೇಶದ ಎಂಬತ್ತು ಪಟ್ಟಣಗಳ ಹುಟ್ಟುವಳಿಯನ್ನು ಅವನಿಗೆ ನೀಡಿದನೆಂದೂ, ಅದನ್ನು ಆ ಬೌದ್ಧ ಸಂನ್ಯಾಸಿಯು ಸ್ವೀಕರಿಸಲಿಲ್ಲವೆಂದೂ ಹಿಂದೆ ಹೇಳಿದೆ. ಹರ್ಷನು ಹೀಗೆ ಎಷ್ಟು ಜನ ವಿದ್ವಾಂಸರಿಗೆ ಆಶ್ರಯ ಕೊಟ್ಟನೋ ಅದೆಲ್ಲವೂ ಗೊತ್ತಿಲ್ಲವಾದರೂ, ಅವನ ಆಸ್ಥಾನಕವಿಯಾದ ಬಾಣನನ್ನೂ, ರಾಜಾನುಗ್ರಹದಿಂದ ಮುಂದೆ ಬಂದ ಹರಿದತ್ತನೆಂಬವನನ್ನೂ ಮರೆಯುವ ಹಾಗಿಲ್ಲ. ಇಂತಹ ವಿದ್ಯಾಭಿಮಾನಿಯಾದ ಚಕ್ರವರ್ತಿಯ ಚಕ್ರದಲ್ಲಿ ಸಾಮಂತರು

ತಾವೂ ವಿದ್ಯೆಗೆ ಪ್ರೋತ್ಸಾಹಕೊಡುತ್ತಿದ್ದುದೂ ಜನರು ವಿದ್ಯೆ ಕಲಿಯಲು ಉತ್ಸಾಹಿಗಳಾಗಿದ್ದುದೂ ಸಹಜ ತಾನೆ! ರಾಜನು ಹೇಗೋ ಪ್ರಜೆಗಳೂ ಹಾಗೇ!

ಅದೆ ಕಾರಣವಾಗಿ ಹರ್ಷನ ಕಾಲದ ಹಿಂದೂದೇಶದಲ್ಲಿ ಪ್ರಸಿದ್ಧರಾದ ಸಂಸ್ಕೃತ ಕವಿಗಳು ಅನೇಕರಿದ್ದರು. ಆಸ್ಥಾನಕವಿಯಾದ ಬಾಣ, ಅವನ ಮಾವನಾದ ಮಯೂರ, ಕಿರಾತಾರ್ಜುನೀಯವನ್ನು ಬರೆದ ಭಾರವಿ, ಸುಭಾಷಿತದ ಕರ್ತೃವಾದ ಭರ್ತೃಹರಿ—ಇವರು ಕೆಲವರು. ಶಿಶುಪಾಲವಧ ಕಾವ್ಯವನ್ನು ಬರೆದ ಮಾಘನೂ, ಜಾನಕೀಹರಣವೆಂಬ ನಾಟಕ ಬರೆದ ಕುಮಾರದಾಸನೂ ಆ ಕಾಲದವರೇ ಎನ್ನುವರು. ಕಾಂಚೀಪುರದ ಅರಸನಾಗಿ ಮತ್ತವಿಲಾಸವೆಂಬ ಪ್ರಹಸನವನ್ನು ಬರೆದು ಪ್ರಸಿದ್ಧನಾದ ಮಹೇಂದ್ರವಿಕ್ರಮನು ಏಳನೆಯ ಶತಮಾನದ ಮೊದಲಿನಲ್ಲಿದ್ದವನು. ದೇಶಭಾಷಾ ಕವಿಯಾದ ಈಶಾನ, ವರ್ಣನೆಗಳಲ್ಲಿ ಕುಶಲಿಯಾದ ವೇಣೀಭಾರತ, ಪ್ರಾಕೃತ ಭಾಷಾಕವಿಯಾದ ವಾಯು ವಿಕಾರ—ಇವರು ಬಾಣನಿಗೆ ಚಿಕ್ಕಂದಿನಲ್ಲಿ ಸಹವಾಸಿಗಳು. ಈ ಹೆಸರುಗಳಲ್ಲದೆ, ಕಾಶಿಕಾ ಎಂಬ ಗ್ರಂಥವನ್ನು ಬರೆದ ಜಯಾದಿತ್ಯ ಮತ್ತು ವಾಮನ, ಬೇಡಾವೃತ್ತಿ ಎಂಬ ಗ್ರಂಥದ ಶ್ಲೋಕಭಾಗವನ್ನು ಬರೆದ ಧರ್ಮಪಾಲ, ನೈಯಾಯಿಕನಾದ ಧರ್ಮಕೀರ್ತಿ, ರತ್ನಕೂಟ ಸೂತ್ರವನ್ನು ಬರೆದ ರಾಹುಲಮಿತ್ರ, ವಿಶ್ವಂತರನೆಂಬವನ ನಾಟಕವನ್ನು ಬರೆದ ಚಂದ್ರ—ಮುಂತಾದವರ ಹೆಸರು ಕೂಡ ಆ ಕಾಲದ ಪ್ರಸಿದ್ಧ ಸಾಹಿತಿಗಳ ಹೆಸರಿನೊಡನೆ ಸೇರತಕ್ಕವು.

ಹರ್ಷನು ವಿದ್ಯಾಪೀಠಗಳಿಗೆ ದಾನಪತಿಯಾಗಿದ್ದು ತನ್ನ ವಿದ್ಯಾಭಿಮಾನವನ್ನು ತೋರಿಸಿದನೆಂದು ಹಿಂದೆ ಹೇಳಿದುದಕ್ಕೆ ಒಂದು ಉದಾಹರಣೆ: ಹರ್ಷನು ನೂರು ಅಡಿ ಎತ್ತರದ ಹಿತ್ತಾಳೆಯ ವಿಹಾರವೊಂದನ್ನು ನಾಲಂದಾ ವಿದ್ಯಾಪೀಠಕ್ಕಾಗಿ ಕಟ್ಟಿಸಿಕೊಟ್ಟನು. ಅಲ್ಲದೆ ಅಲ್ಲಿಯ ವೆಚ್ಚಕ್ಕಾಗಿ ಅನೇಕ ಭೂಸ್ಥಿತಿಗಳನ್ನು ಬಿಟ್ಟುಕೊಟ್ಟನು. ಆ ವಿದ್ಯಾಪೀಠಕ್ಕೆ ಸೇರಿದಂತೆ ಒಂದು ಸಂಘಾರಾಮವನ್ನು ಕಟ್ಟಿಸಿದನು. ಅಲ್ಲಿಯ ಭಿಕ್ಷುಗಳಿಗೆ ಅನ್ನಬಟ್ಟೆಗಳನ್ನು ಏರ್ಪಡಿಸಿದನು. ಅಲ್ಲಿಯ

ಉಪಾಧ್ಯಾಯರುಗಳಲ್ಲಿ ನಲುವತ್ತು ಮಂದಿಗೆ ತನ್ನ ವೆಚ್ಚದಿಂದ ಭೋಜನ ಮಾಡಿಸುತ್ತಿದ್ದನು.

## ಆಗಿನ ಧಾರ್ಮಿಕ ಜೀವನ

ಏಳನೆಯ ಶತಮಾನದಲ್ಲಿ ಹಿಂದೂದೇಶದ ಉತ್ತರಾರ್ಧವನ್ನು ಆಳುತ್ತಿದ್ದ ಹರ್ಷನು ಬೌದ್ಧನು ಹೌದು. ಆ ಕಾಲದಲ್ಲಿ ಚೀನದಿಂದ ಭಾರತಕ್ಕೆ ಬಂದ ಹುಯೆನ್‌ತ್ಸಾಂಗನೂ ಬೌದ್ಧನು. ಅವನು ಹರ್ಷನ ಕಾಲದ ಹಿಂದೂದೇಶದಲ್ಲಿ ಬೌದ್ಧಮತದ ಉತ್ತಮ ಸ್ಥಿತಿಯನ್ನು ಕಂಡುದು ನಿಜ. ಆದರೆ ಬೌದ್ಧಮತವೊಂದೇ ಆ ಕಾಲದ ಮತವಾಗಿರಲಿಲ್ಲ. ಬ್ರಾಹ್ಮಣ ಮತವೂ ಬಹಳ ಉತ್ತಮ ಸ್ಥಿತಿಯಲ್ಲಿತ್ತು. ಆ ದೇಶದ ವಿವಿಧ ಜಾತಿಗಳಲ್ಲಿ ಬ್ರಾಹ್ಮಣರೇ ಬಹು ಶುದ್ಧರಾಗಿದ್ದವರು; ಅವರನ್ನು ಎಲ್ಲರೂ ಗೌರವಿಸುತ್ತಿದ್ದರು; ಹಿಂದೂದೇಶವನ್ನು ಆಗ ಬ್ರಾಹ್ಮಣರ ದೇಶವೆಂದು ಕರೆಯುತ್ತಿದ್ದರು—ಎಂದು ಹುಯೆನ್‌ತ್ಸಾಂಗನು ಹೇಳಿದ್ದಾನೆ.

ಆಗಿನ ಬ್ರಾಹ್ಮಣ ಸಂನ್ಯಾಸಿಗಳಲ್ಲಿ ಕೆಲವರು ನವಿಲುಗರಿಯನ್ನು ಧರಿಸುವರು; ಕೆಲವರು ರುಂಡಮಾಲೆಗಳನ್ನು ಹಾಕಿಕೊಳ್ಳುವರು; ಕೆಲವರು ಬೆತ್ತಲೆ ತಿರುಗುವರು; ಕೆಲವರು ಹುಲ್ಲಿನಿಂದ ಮೈಮುಚ್ಚಿಕೊಳ್ಳುವರು; ಕೆಲವರು ಕೂದಲನ್ನೆಲ್ಲ ಕಿತ್ತುಹಾಕಿಕೊಳ್ಳುವರು; ಕೆಲವರು ಉದ್ದವಾಗಿ ಗಡ್ಡ ಬೆಳೆಸಿ ಅದನ್ನು ತಲೆಯ ಮೇಲೆ ಗಂಟುಹಾಕುವರು; ಕೆಲವರು ಮೈಗೆಲ್ಲ ಬೂದಿ ಬಳಿದುಕೊಳ್ಳುವರು;—ಹೀಗೆ ಅವರ ಬಾಹ್ಯ ವೇಷವು ವಿವಿಧವಾಗಿರುತ್ತಿತ್ತು. ಅವರು ಉಪಯೋಗಿಸುತ್ತಿದ್ದ ಬಟ್ಟೆಬರೆ ಕೂಡ ಬೇರೆ ಬೇರೆ ತೆರನಾಗಿತ್ತು.

ಬ್ರಾಹ್ಮಣರೂ ಅಲ್ಲದೆ ಬೌದ್ಧರೂ ಅಲ್ಲದ ಬೇರೆ ಸಂನ್ಯಾಸಿಗಳೂ ಇದ್ದರು. ಅವರಲ್ಲಿ ಭೂತ, ನಿರ್ಗ್ರಂಥ, ಕಾಪಾಲಿಕ, ಚುಂಡಿಂಕ ಎಂಬವರು ಕೆಲವರು ಮುಖ್ಯವಾದವರು. ಭೂತರು ಮೈಗೆಲ್ಲ ಮಸಿ ಬಳಿದುಕೊಳ್ಳುತ್ತಿದ್ದರು; ನಿರ್ಗ್ರಂಥರು ಬಟ್ಟೆಯಿಲ್ಲದೆ ಬೆತ್ತಲೆಯಿರುತ್ತಿದ್ದರು; ಕಾಪಾಲಿಕರು ತಲೆಗೂ ಕೊರಳಿಗೂ ಮೂಳೆಗಳ ಮಾಲೆ ಹಾಕಿಕೊಂಡು, ಶಿವನನ್ನೂ ಶಕ್ತಿಯನ್ನೂ ಪೂಜಿಸಿ, ಹಳ್ಳಕೊಳ್ಳಗಳಲ್ಲಿ ವಾಸಿಸುತ್ತಿದ್ದರು;

ಚುಂಡಿಂಕರು ಕೊಳೆ ಮೆತ್ತಿದ ಬಟ್ಟೆಗಳನ್ನುಟ್ಟು, ಹಳಸಿದ ಆಹಾರವನ್ನು ತಿಂದು, ಜಟೆ ಬೆಳೆಯಿಸುತ್ತಿದ್ದರು.

ಆ ಕಾಲದ ದೊರೆಗಳೂ ಅವರ ಪ್ರಜೆಗಳೂ ಸಂನ್ಯಾಸಿಗಳನ್ನು ಗೌರವಿಸುತ್ತಿದ್ದರು. ಸಂನ್ಯಾಸತ್ವದ ಮಹತ್ವವನ್ನು ಕಂಡ ಅನೇಕ ಧನಾಢ್ಯರು ತಮ್ಮ ಐಶ್ವರ್ಯವನ್ನೂ ಮನೆಮಠಗಳನ್ನೂ ಬಿಟ್ಟು, ಸತ್ಯವನ್ನು ಹುಡುಕುತ್ತ ಸಂನ್ಯಾಸಿಗಳಾಗುವರು. ಹೀಗೆ ಸುಖಸಂಪತ್ತನ್ನು ತೊರೆದು ಸತ್ಯಾನ್ವೇಷಣೆಗಾಗಿ ಸಂನ್ಯಾಸಿಯಾದವನನ್ನು ಜನರು ಆರಾಧಿಸುತ್ತಿದ್ದುದರಲ್ಲಿ ಆಶ್ಚರ್ಯವೇನೂ ಇಲ್ಲ. ಏಕೆಂದರೆ ಅವರು ಸಂನ್ಯಾಸಿಗಳಾಗುತ್ತಿದ್ದುದು ಲೋಕಹಿತಾರ್ಥವಾಗಿ. ಅವರು ಸತ್ಯವನ್ನು ಹುಡುಕುತ್ತ ಹೊರಟು, ತಾವು ಕಂಡ ನಿಜವಾದ ಜ್ಞಾನವನ್ನು ಸಾಮಾನ್ಯರ ಬಳಿಗೆ ತಂದು ಬೀರುತ್ತಿದ್ದರು. ಆ ಸಂನ್ಯಾಸಿಗಳ ಸೇವೆಯ ಫಲವಾಗಿ, ರಾಜ್ಯಕ್ಕೆ ಯಾವ ವೆಚ್ಚವೂ ಇಲ್ಲದೆ ರಾಜ್ಯದ ಪ್ರಜೆಗಳಿಗೆ ಜ್ಞಾನದಾನ ನಡೆಯುತ್ತಿತ್ತು ; ಆ ದಾನವು ಯಾವ ರಾಜ್ಯವೂ ಕೈಕೊಂಡು ನಡೆಸಲಾರದಷ್ಟು ಸುಲಭವಾಗಿ, ಸಮರ್ಪಕವಾಗಿ ನಡೆಯುತ್ತಿತ್ತು.

ಆ ಸಂನ್ಯಾಸಿಗಳನ್ನು ಕುರಿತು ಹುಯೆನ್‌ತ್ಸಾಂಗನು ಹೀಗೆ ಬರೆದಿದ್ದಾನೆ: "ಅವರು ಶ್ರಮವೆಂಬುದನ್ನು ಮರೆತು, ಕಲೆಗಳನ್ನೂ ಶಾಸ್ತ್ರಗಳನ್ನೂ ಕುರಿತು ಎಷ್ಟಾದರೂ ಮಾತನಾಡಬಲ್ಲರು. ಜ್ಞಾನವನ್ನು ಹುಡುಕುತ್ತ ಹೊರಟರೆಂದರೆ, ಅವರಿಗೆ ನಾಲ್ಕು ಸಾವಿರ ಮೈಲಿಯ ಪ್ರಯಾಣ ಕೂಡ ದೀರ್ಘವಲ್ಲ !"

ನಾಲಂದಾ ಪೀಠದಂತೆಯೇ ಹರ್ಷನ ಕಾಲದಲ್ಲಿ ಪ್ರಸಿದ್ಧವಾಗಿದ್ದುದು ಬೌದ್ಧಸಂನ್ಯಾಸಿಯಾದ ದಿವಾಕರಮಿತ್ರನ ಆಶ್ರಮ. ವಿಂಧ್ಯಾರಣ್ಯದ ಗರ್ಭದಲ್ಲಿದ್ದ ಆ ಆಶ್ರಮಕ್ಕೆ ನಾನಾ ಮತಗಳವರು ಸತ್ಯಾರ್ಥಿಗಳಾಗಿ ಬರುತ್ತಿದ್ದರು. ದಿಗಂಬರ ಜೈನರು, ಶ್ವೇತಾಂಬರ ಜೈನರು, ಪರಿವ್ರಾಜಕರು, ಬ್ರಹ್ಮಚಾರಿಗಳು, ಭಾಗವತರು, ವೈಷ್ಣವರು, ಶೈವರು, ಕೇಶಲುಂಚಕರು, ಚಾರ್ವಾಕರು, ನೈಯಾಯಿಕರು, ಕಾಪಿಲರು, ಕಾಣಾದರು, ವೇದಾಂತಿಗಳು, ಧರ್ಮಶಾಸ್ತ್ರಜ್ಞರು, ಶಾಬ್ದಿಕರು, ಪೌರಾಣಿಕರು,

ಇವರೇ ಮೊದಲಾಗಿ ವಿವಿಧ ಪಂಗಡದವರು ತಮ್ಮ ವಿವಿಧತೆಯನ್ನು ಮರೆತು, ಬೌದ್ಧರೊಡನೆಯೇ ಆ ಆಶ್ರಮದಲ್ಲಿ ವಾಸಿಸುತ್ತಿದ್ದರು. ಸದಾ ಚಿಂತನೆ ಮಾಡುತ್ತ, ಚರ್ಚೆ ನಡೆಸುತ್ತ, ಸಂದೇಹಗಳನ್ನು ಕಳೆದು ಕೊಳ್ಳುತ್ತ, ತಮ್ಮ ಜ್ಞಾನವನ್ನು ಹೆಚ್ಚಿಸಿಕೊಳ್ಳುತ್ತ, ಸತ್ಯವೊಂದನ್ನೇ ಗಮನದಲ್ಲಿಟ್ಟು ಅವರೆಲ್ಲರೂ ಅನ್ಯೋನ್ಯವಾಗಿದ್ದರು.

ಹೀಗೆ ದೇಶದಲ್ಲಿ ಅನೇಕ ಮತಗಳು ಇದ್ದುವಷ್ಟೆ. ಬೌದ್ಧಮತ ದಲ್ಲಿಯೇ ಮಹಾಯಾನ ಹೀನಯಾನವೆಂಬ ಎರಡು ಪಂಗಡವಿತ್ತು. ಆ ಎರಡು ಪಂಗಡಗಳೂ ಉಪಪಂಗಡಗಳಾಗಿ ಒಡೆದು, ಅವುಗಳ ಸಂಖ್ಯೆ ಹದಿನೆಂಟಾಗಿತ್ತು. ಆದರೂ, ಹುಯೆನ್‌ತ್ಸಾಂಗನು ತಾನು ಹೋದ ಕಡೆಯಲ್ಲೆಲ್ಲ ಮಹಾಯಾನದವರೂ ಹೀನಯಾನದವರೂ ಒಟ್ಟಿಗೆ ಅಕ್ಕ ಪಕ್ಕದಲ್ಲೆ ವಾಸಿಸುತ್ತಿದ್ದುದನ್ನು ಕಂಡನು. ಅಲ್ಲದೆ, ಬೌದ್ಧರ ವಿಹಾರಗಳ ಪಕ್ಕದಲ್ಲೇ ಬ್ರಾಹ್ಮಣರ ದೇವಸ್ಥಾನಗಳನ್ನೂ ನೋಡಿದನು; ಬೌದ್ಧರ ವಿಹಾರಗಳಲ್ಲಿ ಭಿಕ್ಷುಗಳೊಡನೆ ಬ್ರಾಹ್ಮಣರೂ, ಬ್ರಾಹ್ಮಣ ದೇವಾಲಯ ಗಳಲ್ಲಿ ಬ್ರಾಹ್ಮಣರೊಡನೆ ಭಿಕ್ಷುಗಳೂ ಪ್ರೀತಿ ವಿಶ್ವಾಸಗಳಿಂದ ಸೇರಿ ನಡೆಯುತ್ತಿದ್ದುದನ್ನೂ ಆತನು ಗಮನಿಸಿದನು. ಇದು ಆ ಕಾಲದಲ್ಲಿ ಕಾಣಬಹುದಾಗಿದ್ದ ಅನ್ಯಮತ ಸಹನೆ !

ಸಂನ್ಯಾಸಿಗಳಾಗುತ್ತಿದ್ದವರು ಕೆಲವರು ಮಾತ್ರ. ಇತರರು, ಸಾಮಾನ್ಯ ಜನರು,—ಬ್ರಾಹ್ಮಣರಾಗಲಿ, ಬೌದ್ಧರಾಗಲಿ—ದೇವತಾ ಮೂರ್ತಿಗಳನ್ನು ಪೂಜಿಸುತ್ತಿದ್ದರು. ಬ್ರಾಹ್ಮಣರು ಸಾಮಾನ್ಯವಾಗಿ ಪೂಜಿಸುತ್ತಿದ್ದುದು ವಿಷ್ಣು, ಶಿವ, ಮತ್ತು ಸೂರ್ಯನನ್ನು. ರಾಜಧಾನಿ ಯಾದ ಕನ್ಯಾಕುಬ್ಜದಲ್ಲಿ ಹುಯೆನ್‌ತ್ಸಾಂಗನು ಈ ಮೂರು ದೇವತೆಗಳ ದೇವಾಲಯಗಳನ್ನು ಕಂಡನು. ಆಗ ವಾರಣಾಸಿಯಲ್ಲಿ ಶಿವಪೂಜೆ ಬಹಳ ವಾಗಿತ್ತು. ಅಲ್ಲಿ ಇದ್ದ ಸುಮಾರು ನೂರು ದೇವಾಲಯಗಳಲ್ಲಿ ಶಿವಾಲಯ ಗಳೇ ಹೆಚ್ಚಾಗಿದ್ದುವು. ದುರ್ಗಿ, ಭೀಮಾದೇವಿ, ಪೃಥ್ವೀದೇವಿಯರನ್ನೂ ಆ ಕಾಲದಲ್ಲಿ ಪೂಜಿಸುತ್ತಿದ್ದರು. ಮುಲ್ತಾನಿನ ಸೂರ್ಯನ ಗುಡಿಯಲ್ಲಿದ್ದ ವಿಗ್ರಹವು ಚಿನ್ನದ್ದು ; ಅದಕ್ಕೆ ರತ್ನಗಳನ್ನು ಮೆಟ್ಟಿದ್ದರು. ಆ ಸೂರ್ಯಾ ಲಯಕ್ಕೆ ದೇಶದೇಶಗಳಿಂದ ಸಾವಿರಾರು ಯಾತ್ರಿಕರು ಬರುತ್ತಿದ್ದರು.

ಸುಮಂಗಲಿಯರು ಆ ದೇವಾಲಯದಲ್ಲಿ ಸದಾ ಮಂಗಳಗಾಯನ ಮಾಡುತ್ತ, ರಾತ್ರಿಯೆಲ್ಲ ದೀಪಗಳನ್ನು ಹತ್ತಿಸಿ, ಧೂಪವನ್ನೂ ಹೂಗಳನ್ನೂ ಸಮರ್ಪಿಸುತ್ತಿದ್ದರು. ಬೌದ್ಧರು ಕೂಡ ಹಿಂದುಗಳಂತೆಯೇ ಮೂರ್ತಿ ಪೂಜೆ ಮಾಡುತ್ತಿದ್ದರು. ಬುದ್ಧನ ಶಿಷ್ಯರಾದ ಸಾರಿಪುತ್ರ, ಮೌದ್ಗಲ್ಯಾಯನ, ಉಪಾಲಿ, ಆನಂದ, ರಾಹುಲರ ವಿಗ್ರಹಗಳನ್ನು ಬೌದ್ಧರು ಮಥುರಾನಗರದಲ್ಲಿ ಆರಾಧಿಸುತ್ತಿದ್ದರು. ಬೌದ್ಧರು ತಮ್ಮ ಒಂದೊಂದು ಧರ್ಮ ಗ್ರಂಥಕ್ಕೂ ಒಂದೊಂದು ಸ್ತೂಪವನ್ನು ರಚಿಸಿ, ಅದಕ್ಕೂ ಪೂಜೆ ಸಲ್ಲಿಸುತ್ತಿದ್ದರು. ಮಗಧದೇಶದ ಒಂದು ವಿಹಾರದಲ್ಲಿ ಮೂವತ್ತು ಅಡಿ ಎತ್ತರದ ಬುದ್ಧನ ಕಲ್ಲುವಿಗ್ರಹವನ್ನು ಸ್ಥಾಪಿಸಿ, ಅದರ ಎರಡು ಕಡೆಯೂ ತಾರಾ ಬೋಧಿಸತ್ವ ಅವಲೋಕಿತೇಶ್ವರ ಬೋಧಿಸತ್ವರ ವಿಗ್ರಹಗಳನ್ನೂ ನಿಲ್ಲಿಸಿ ಪೂಜಿಸುತ್ತಿದ್ದರು. ಹೀಗಾಗಿ, ಆಗ ಹಿಂದೂದೇಶದಲ್ಲಿ ಎಲ್ಲ ನೋಡಿದರೂ ವಿಗ್ರಹ, ವಿಹಾರ, ಸ್ತೂಪ, ದೇವಸ್ಥಾನಗಳೇ !

## ಆ ಕಾಲದ ಪಟ್ಟಣಗಳು, ಕಟ್ಟಡಗಳು

ಆ ಕಾಲದ ನಗರಗಳ ಸುತ್ತ ಎತ್ತರವಾಗಿ ದಪ್ಪನಾದ ಗೋಡೆಗಳಿದ್ದುವು. ಆ ಗೋಡೆಗಳನ್ನು ಸಾಮಾನ್ಯವಾಗಿ ಇಟ್ಟಿಗೆಗಳಿಂದ ಕಟ್ಟುತ್ತಿದ್ದರು. ಮನೆಗಳ ಗೋಡೆಗಳಿಗೆ ಮರವನ್ನೋ ಬಿದಿರಿನ ತಟಿಕೆಗಳನ್ನೋ ಬಳಸುತ್ತಿದ್ದರು. ದೊಡ್ಡಮನುಷ್ಯರ ಮನೆಗಳಿಗೆ ಉಪ್ಪರಿಗೆಗಳಿರುತ್ತಿತ್ತು, ವಿಶಾಲವಾದ ಅಂಗಳಗಳಿರುತ್ತಿತ್ತು. ಅವು ಎತ್ತರವಾಗಿರುತ್ತಿದ್ದುವು; ಅವುಗಳಿಗೆ ಸುಟ್ಟ ಅಥವ ಸುಡದ ಹೆಂಚುಗಳನ್ನು ಹೊದಿಸುತ್ತಿದ್ದರು. ಗೋಡೆಗಳಿಗೆ ಸುಣ್ಣ ಬಳಿಯುತ್ತಿದ್ದರು. ರಾಜ್ಯಶ್ರೀಗೆ ಮದುವೆಯಾಗುವಾಗ, ಕೆಲಸಗಾರರು ಏಣಿಗಳ ಮೇಲೇರಿ, ಒಂದು ಕೈಲಿ ಕೂರ್ಚವನ್ನು ಹಿಡಿದೆತ್ತಿ, ಹೆಗಲ ಮೇಲೆ ಸುಣ್ಣದ ಪಾತ್ರೆ ಹೊತ್ತು, ಅರಮನೆಯ ಬೀದಿಯ ಕಡೆಯ ಗೋಡೆಗೆ ಸುಣ್ಣ ಹೊಡೆಯುತ್ತಿದ್ದರು. ಬಡವರ ಮನೆಗಳನ್ನು ಇಟ್ಟಿಗೆಯಿಂದಲೋ ತಟಿಕೆಯಿಂದಲೋ ಕಟ್ಟಿ, ಛಾವಣಿಗೆ ಹುಲ್ಲು ಹೊದಿಸುತ್ತಿದ್ದರು; ಗೋಡೆಗೆ ಸುಣ್ಣ ಹೊಡೆದು, ನೆಲಕ್ಕೆ ಸೆಗಣಿ ಸಾರಿಸಿ, ಆ ಆ ಕಾಲದ ಹೂಗಳನ್ನು ನೆಲದ ಮೇಲೆ ಚೆಲ್ಲುತ್ತಿದ್ದರು.

ಆ ಕಾಲದ ಕಟ್ಟಡಗಳಲ್ಲೆಲ್ಲ ವಿಸ್ಮಯವನ್ನುಂಟುಮಾಡುತ್ತಿದ್ದುವು ಬೌದ್ಧರ ವಿಹಾರಗಳು. ಆ ವಿಹಾರಗಳು ಚೌಕನಾಗಿರುತ್ತಿದ್ದುವು. ಅವುಗಳ ನಾಲ್ಕು ಮೂಲೆಗೆ ನಾಲ್ಕು ಗೋಪುರ; ಒಂದರ ಮೇಲೆ ಒಂದರಂತೆ ಮೂರು ಅಂತಸ್ತು; ತೊಲೆ ದೂಲಗಳಲ್ಲಿ ಅನೇಕ ಚಿತ್ರಾಕೃತಿಗಳನ್ನು ಕಡೆಯುತ್ತಿದ್ದರು. ಗೋಡೆ, ಕಂಬ, ಬಾಗಿಲು, ಕಿಟಕಿಗಳನ್ನು ನಾನಾ ಬಣ್ಣಗಳಿಂದ ಚಿತ್ರಿಸುತ್ತಿದ್ದರು.

ಗೃಹ ನಗರಗಳ ರಚನೆಯ ವಿಚಾರವಾಗಿ ಸಲಹೆಕೊಡುತ್ತಿದ್ದವರಿಗೆ 'ಗೃಹಚಿಂತಕ'ರೆಂದು ಹೆಸರಿತ್ತು. ರಾಜಮಾರ್ಗಗಳು ವಿಶಾಲವಾಗಿರದೆ ಬಹಳ ಇಕ್ಕಟ್ಟಾಗಿದ್ದರೂ, ನಗರರಚನೆಯಲ್ಲಿ ಒಂದು ರೀತಿ, ಒಂದು ಕ್ರಮ ಕಂಡುಬರುತ್ತಿತ್ತೆಂದು ಹುಯೆನ್‌ತ್ಸಾಂಗನು ಅಭಿಪ್ರಾಯಪಟ್ಟಿದ್ದಾನೆ. ರಾಜಮಾರ್ಗಗಳಲ್ಲಿ ಅಂಗಡಿಗಳೂ, ಇತರ ಮಾರ್ಗಗಳಲ್ಲಿ ವಿಶ್ರಾಮಗೃಹಗಳೂ ಇದ್ದುವು. ಕಟುಕರು, ಬೆಸ್ತರು, ನರ್ತಕರು, ವಧಕರು, ಜಲಗಾರರು ಮುಂತಾದ ಅಸಭ್ಯವೆನಿಸಿದ ಅಥವ ಅಶುದ್ಧವೆನಿಸಿದ ವೃತ್ತಿಗಳನ್ನು ಆಶ್ರಯಿಸಿದವರ ಮನೆಗಳು ಊರ ಹೊರಗೆ ಇದ್ದುವು. ಅವರ ಮನೆಗಳ ಮೇಲೆ ಅವರವರ ವೃತ್ತಿಯ ಲಕ್ಷಣಗಳನ್ನು ಚಿತ್ರಿಸುತ್ತಿದ್ದರು; ನೋಡಿದವರಿಗೆ ಆ ಮನೆಯವರ ವೃತ್ತಿಯೇನೆಂದು ಸುಲಭವಾಗಿ ತಿಳಿಯುತ್ತಿತ್ತು.

ಹರ್ಷನ ತಂದೆಯ ಕಾಲದಲ್ಲಿ ಸ್ಥಾಣ್ವೀಶ್ವರವು ವರ್ಧನರಾಜ್ಯದ ರಾಜಧಾನಿಯಾಗಿತ್ತು. ಹರ್ಷನು ಪಟ್ಟಕ್ಕೆ ಬಂದ ಮೇಲೆ, ಆತನು ಕನ್ಯಾಕುಬ್ಜವನ್ನು ರಾಜಧಾನಿಯಾಗಿ ಮಾಡಿಕೊಂಡನು. ಕನ್ಯಾಕುಬ್ಜವು ಐದು ಮೈಲಿ ಉದ್ದವೂ ಒಂದೂವರೆ ಮೈಲಿ ಅಗಲವೂ ಇತ್ತು. ಅಲ್ಲಿ ೨೦೦ ದೇವಾಲಯುಗಳಿದ್ದುವು. ಅಲ್ಲಿಯ ನೂರು ವಿಹಾರಗಳಲ್ಲಿ ೧೦,೦೦೦ ಭಿಕ್ಷುಗಳು ವಾಸವಾಗಿದ್ದರು. ಉನ್ನತವಾದ ಪ್ರಾಸಾದಗಳು, ರಮ್ಯವಾದ ತೋಟಗಳು, ತಿಳಿನೀರಿನ ತಟಾಕಗಳು, ಮತ್ತು ವಿವಿಧ ವಸ್ತುಸಂಗ್ರಹಾಲಯಗಳಿಂದ ಆ ನಗರವು ಶೋಭಿಸುತ್ತಿತ್ತು. ಅಲ್ಲಿಯ ಜನರ ರೂಪು ಚಿತ್ತಾಕರ್ಷಕವಾಗಿತ್ತು. ಅವರು ಫಳಫಳನೆ ಮಿರುಗುವ ರೇಷ್ಮೆಯ ಬಟ್ಟೆಯುಡುತ್ತಿದ್ದರು. ವಿದ್ಯಾವಂತರು, ಕಲಾಪ್ರೇಮಿಗಳು, ಕುಲೀನರು,

ಮಹಾ ಧನಾಢ್ಯರು ಮುಂತಾದವರ ನೆಲೆಬೀಡಾಗಿದ್ದ ಕನ್ಯಾಕುಬ್ಜವು ಚಕ್ರವರ್ತಿಯ ರಾಜಧಾನಿಯೆಂಬ ಹೆಸರಿಗೆ ತಕ್ಕ ಹಾಗಿತ್ತು.

ರಾಜ್ಯದ ಉಳಿದ ಪಟ್ಟಣಗಳೇನೂ ರಾಜಧಾನಿಗಿಂತ ಹಿಂದೆ ಬಿದ್ದಿರಲಿಲ್ಲ. ಹರ್ಷನು ತನ್ನ ಮೋಕ್ಷಪರಿಷತ್ತನ್ನು ನಡೆಸಿ, ದೇಶ ದೇಶಾಂತರಗಳಿಂದ ಜನರನ್ನು ಆಕರ್ಷಿಸಿ, ಮಹಾದಾನ ನಡೆಸಿದುದು ಪ್ರಯಾಗದಲ್ಲಿ. ಜಗತ್ಪ್ರಸಿದ್ಧವಾದ ವಿದ್ಯಾಪೀಠಗಳಿದ್ದುದು ನಾಲಂದದಲ್ಲಿ ಮತ್ತು ವಲ್ಲಭಿರಾಜ್ಯದಲ್ಲಿ. ಮಥುರಾನಗರವು ಅಶೋಕನು ಕಟ್ಟಿಸಿದ ಸ್ತೂಪಗಳಿಂದಲೂ, ಇತರ ವಿಹಾರ ದೇವಾಲಯಗಳಿಂದಲೂ ರಾಜಿಸುತ್ತಿತ್ತು; ಅಲ್ಲಿ ತಯಾರಾಗುತ್ತಿದ್ದ ಚಿನ್ನದ ಸರಿಗೆಯ ಹತ್ತಿಯ ಬಟ್ಟೆ ಬಹಳ ಪ್ರಸಿದ್ಧವಾಗಿತ್ತು. ಪೂರ್ವದ ರಾಜಧಾನಿಯಾದ ಸ್ಥಾಣ್ವೀಶ್ವರದಲ್ಲಿ ವ್ಯಾಪಾರ ಬಹಳ ಚೆನ್ನಾಗಿ ನಡೆಯುತ್ತಿತ್ತು; ದೇಶದೇಶಗಳ ಅಪೂರ್ವ ವಸ್ತುಗಳೆಲ್ಲ ಅಲ್ಲಿ ಬಂದು ರಾಶಿಯಾಗುತ್ತಿದ್ದುವು. ಈಗ ಹರಿದ್ವಾರವೆನಿಸಿರುವ ಮಯೂರಾ ನಗರಕ್ಕೆ ನಾನಾ ಕಡೆಗಳಿಂದ ಸಾವಿರಾರು ಜನರು ತೀರ್ಥಸ್ನಾನಕ್ಕೆ ಬರುತ್ತಿದ್ದರು; ಅವರಿಗೆ ತಂಗುವ ಸ್ಥಳವನ್ನೂ ಊಟ ಔಷಧಿಗಳನ್ನೂ ಉಚಿತವಾಗಿ ಒದಗಿಸಲು ಅನೇಕ ಪುಣ್ಯಶಾಲೆಗಳನ್ನು ಧರ್ಮಾತ್ಮರು ಅಲ್ಲಿ ಕಟ್ಟಿಸಿದ್ದರು. ಕೌಶಾಂಬಿಯಲ್ಲಿ ಐವತ್ತು ದೇವಾಲಯ; ಗೋವಿಷಾಣದಲ್ಲಿ ಮೂವತ್ತು; ವಿಶೋಕೆಯಲ್ಲಿ ಇಪ್ಪತ್ತು ವಿಹಾರ, ನೂರು ದೇವಾಲಯ; ತಾಮ್ರಲಿಪ್ತಿಯಲ್ಲಿ ಐವತ್ತು ದೇವಾಲಯ; ಕಾಮರೂಪದಲ್ಲಿ ನೂರಾರು ದೇವಾಲಯ—ಹೀಗೆ ರಾಜ್ಯದಲ್ಲಿ ಎಲ್ಲಿ ನೋಡಿದರೂ ವಿಹಾರಗಳೂ ದೇವಾಲಯಗಳೂ ತಾವೇ ತಾವಾಗಿದ್ದುವು. ಮತಿಪುರದಲ್ಲಿ ಐವತ್ತು ದೇವಾಲಯಗಳಿದ್ದುವು; ಅಲ್ಲಿ ಕಾಳು ಕಡ್ಡಿ ಹೂ ಹಣ್ಣು ತುಂಬಿ ತುಳುಕುತ್ತಿತ್ತು. ವಾರಣಾಸಿಯ ದೇವಸ್ಥಾನಕ್ಕೆ ಅನೇಕ ಉಪ್ಪರಿಗೆಗಳಿದ್ದುವು; ಅವುಗಳ ಸೂರಿನ ಕಲ್ಲಿನಲ್ಲಿಯೂ ಮರದಲ್ಲಿಯೂ ತರತರವಾದ ಚಿತ್ರ ಕೊರೆದಿದ್ದರು. ಆ ನಗರದ ಜನರು ಮಹಾ ಧನಾಢ್ಯರು, ಅವರ ಮನೆಗಳ ತುಂಬ ಅಮೂಲ್ಯವಾದ ಅನೇಕ ವಸ್ತುಗಳಿದ್ದುವು. ಪುಣ್ಯವರ್ಧನದಲ್ಲಿ ಅನೇಕ ದೇವಾಲಯಗಳು, ವಿಹಾರಗಳು, ಸರಸ್ಸುಗಳು, ಪುಣ್ಯಶಾಲೆಗಳು ಮತ್ತು ಪುಷ್ಪವನ

ಗಳು ಅಲ್ಲಲ್ಲಿ ಚೆಲ್ಲಿಕೊಂಡು ವಿರಾಜಿಸುತ್ತಿದ್ದುವು. ತಾಮ್ರಲಿಪ್ತಿಯು ಬಂದು ಹೋಗುವ ಹಡಗುಗಳಿಗೆಲ್ಲ ರೇವುಪಟ್ಟಣವಾಗಿತ್ತು.

ಹೀಗೆ ತನ್ನ ಮುಖ್ಯಪಟ್ಟಣಗಳ ಮೂಲಕ ತನ್ನ ಆರ್ಥಿಕ ಸಂಪತ್ತನ್ನು ಬೆಳಗಿಸುತ್ತಿದ್ದ ವರ್ಧನ ಚಕ್ರಾಧಿಪತ್ಯದಲ್ಲಿ ಕಲೆ ಕೈಗಾರಿಕೆಗಳಿಗೆ ತಕ್ಕ ಪ್ರೋತ್ಸಾಹ ದೊರಕಿ, ಅವು ಮುಂದೆ ಬರಲು ಕಾರಣವಾಗಿತ್ತು.

## ಆಗಿನ ಕಲೆ ಕೈಗಾರಿಕೆ

ಆ ಕಾಲದಲ್ಲಿ ಅನೇಕ ಕುಶಲಕಲೆಗಳು ಬಳಕೆಯಲ್ಲಿದ್ದುವು. ಆ ಕಲಾವಂತರ ಸಂಘವನ್ನು 'ಸಾರ್ಥ' ಎಂದು ಕರೆಯುತ್ತಿದ್ದರು. ರಾಜ್ಯಶ್ರೀಗೆ ಮದುವೆಯಾದಾಗ ಬಡಗಿಗಳು, ಚಿತ್ರಕಾರರು, ಶಿಲ್ಪಿಗಳು, ಮುಂತಾದವರ ಅನೇಕ ಸಾರ್ಥಗಳನ್ನು ಪ್ರಭಾಕರವರ್ಧನನು ದೇಶ ದೇಶಗಳಿಂದ ಕರೆತರಿಸಿದ್ದನು. ಆ ಕಲಾಪಂಡಿತರ ಬಳಿ ಕೆಲಸ ಕಲಿಯುತ್ತಿದ್ದವರಿಗೆ 'ನವಸೇವಕ'ರೆಂದು ಹೆಸರಿತ್ತು.

ಆ ಕಾಲದಲ್ಲಿ ತರತರವಾದ ಬಟ್ಟೆಗಳನ್ನು ತಯಾರಿಸುತ್ತಿದ್ದರು. ಸೊಗಸಾದ ರೇಷ್ಮೆಯ ಬಟ್ಟೆಗಳೂ ಹಸನಾದ ಹತ್ತಿಯ ಬಟ್ಟೆಗಳೂ ಆಗ ದೊರಕುತ್ತಿದ್ದುವು. ರೇಷ್ಮೆ ಮತ್ತು ಹತ್ತಿಯನೂಲುಗಳ ಬೆರಕೆಯಿಂದ ಬಟ್ಟೆ ನೆಯಿದು, ಅದನ್ನು ಕೌಶೇಯವೆನ್ನುತ್ತಿದ್ದರು. ಪುಂಡ್ರಿ, ಶಣಬು ಮುಂತಾದ ನಾರುಗಳಿಂದ ನೆಯಿದ ಬಟ್ಟೆಗೆ ಕ್ಷೌಮವೆಂದು ಹೆಸರಿತ್ತು. ನಯವಾದ ಉಣ್ಣೆಯ ಬಟ್ಟೆಗಳನ್ನು ಕಂಬಳವೆಂದು ಕರೆಯುತ್ತಿದ್ದರು. ಇನ್ನೊಂದು ತೆರದ ಬಟ್ಟೆಯನ್ನು ಯಾವುದೋ ಕಾಡು ಮೃಗದ ರೋಮದಿಂದ ಮಾಡುತ್ತಿದ್ದರು; ಅದು ಬಹಳ ಸೂಕ್ಷ್ಮವಾಗಿ ನುಣುಪಾಗಿರುತ್ತಿತ್ತು.

ಜನರು ಆ ಬಟ್ಟೆಗಳನ್ನು ಕತ್ತರಿಸಿ ಹೊಲಿಯುತ್ತಿರಲಿಲ್ಲ. ಗಂಡಸರು ಸೊಂಟಕ್ಕೆ ಒಂದು ವಸ್ತ್ರ ಸುತ್ತಿ, ಕಂಕುಳ ಕೆಳಗಿಂದ ತಂದು ಹೊದೆಯುವರು; ಒಂದು ತೋಳು ಮಾತ್ರ ಬೆತ್ತಲೆ ಬಿಡುವರು. ಹೆಂಗಸರು ಉದ್ದವಾದ ಬಟ್ಟೆಯನ್ನು ಧರಿಸುವರು; ಅದು ಎರಡು ತೋಳನ್ನೂ

ಮುಚ್ಚಿ, ಕಾಲಿನವರೆಗೂ ಇಳಿ ಬೀಳುವುದು. ಉತ್ತರ ಹಿಂದೂಸ್ಥಾನದಲ್ಲಿ ಚಳಿಗಾಲದಲ್ಲಿ ಮಾತ್ರ ಮೈಮುಚ್ಚ ಕವಚಗಳನ್ನು ಹಾಕುತ್ತಿದ್ದರು.

ದೊರೆಗಳೂ ದೊಡ್ಡಮನುಷ್ಯರೂ ಆಭರಣಗಳನ್ನು ಉಪಯೋಗಿಸು ತ್ತಿದ್ದರು. ಮಾಲೆಗಳು, ತಲೆಕಟ್ಟುಗಳು, ಉಂಗುರಗಳು, ತೋಳು ಬಳೆಗಳು, ಹಾರಗಳು, ಸಾಮಾನ್ಯವಾಗಿ ಬಳಕೆಯಲ್ಲಿದ್ದುವು.

ರಾಜ್ಯದಲ್ಲಿ ನಡೆಯುತ್ತಿದ್ದ ಮುಖ್ಯವಾದ ಕೈಗಾರಿಕೆಯೆಂದರೆ ಭೂವ್ಯವಸಾಯ. ಆ ಕೆಲಸದಲ್ಲಿ ನೀರು ಹಾಯಿಸುವುದಕ್ಕಾಗಿ 'ತುಲಾ ಯಂತ್ರ'ವೆಂಬ ಸಾಧನವನ್ನು ಉಪಯೋಗಿಸುತ್ತಿದ್ದರು.

* * * *

ಹರ್ಷನು ಹುಟ್ಟಿದಾಗ ನಗರದಲ್ಲಿ ಉತ್ಸವಗಳಾದುವಷ್ಟೆ. ಆಗ ಪರಿಜನರು ಸ್ನಾನೀಯಚೂರ್ಣ ಚಿಮುಕಿಸಿದ ಹೂಗಳನ್ನು ಇಟ್ಟ ವಿಶಾಲ ವಾದ ಬುಟ್ಟಿಗಳನ್ನೂ ; ಸ್ಫಟಿಕಶಿಲೆಯ ಚೂರುಗಳಂತೆ ಬೆಳ್ಳಗಿದ್ದ ಕರ್ಪೂರ ತುಂಬಿದ ಪಾತ್ರೆಗಳನ್ನೂ ; ಚಂದನವರ್ಣದ ಅಡಕೆಕಾಯಿ ಸುತ್ತುಕಟ್ಟಿ, ಮಾವಿನೆಣ್ಣೆಯನ್ನು ತೊಟ್ಟಿಕ್ಕಿಸುವ ಖದಿರಕೇಸರಗಳನ್ನು ತುದಿಯಲ್ಲಿಟ್ಟ ದಂತದ ಪೆಟ್ಟಿಗೆಗಳನ್ನೂ ; ಕೆಂಪು ನಸುಗೆಂಪು ಬಣ್ಣಗಳ ಸಿಂಧೂರ ಪಾತ್ರೆ ಪಿಷ್ಟಾತಕ ಪಾತ್ರೆಗಳನ್ನೂ ; ಕಾಯಿಗೊಂಚಲು ಇಳಿಬೀಳುವ ತಾಂಬೂಲ ವೃಕ್ಷಗಳನ್ನೂ ಹೊತ್ತು ನಡೆದರು.

* * * *

ರಾಜ್ಯಶ್ರೀಯ ವಿವಾಹದ ಸಿದ್ಧತೆಗಳಿಗಾಗಿ ಸಕಲ ದೇಶಗಳಿಂದಲೂ ಶಿಲ್ಪಿಸಾರ್ಥಗಳನ್ನು ಬರಮಾಡಿದ್ದರು. ಚರ್ಮಕಾರರು ಮಂಗಳಪಟಹ ಗಳನ್ನು ಬಡಿದು ನೋಡುತ್ತಿದ್ದರು. ಒರಳು, ಗುಂಡುಕಲ್ಲು ಮುಂತಾದ ಶಿಲಾದ್ಯುಪಕರಣಗಳಲ್ಲಿ ಅರೆದ ಸುಗಂಧಗಳು ತುಂಬಿತ್ತು. ವಿವಾಹ ವೇದಿಯನ್ನು ನಿರ್ಮಿಸಿದ ಸೂತ್ರಧಾರಿಗಳಿಗೆ ಹೂವು ಗಂಧಗಳನ್ನು ಕೊಟ್ಟು ಸತ್ಕರಿಸಿದರು. ಕೆಲಸಗಾರರು ಕೈಯಲ್ಲಿ ಕೂರ್ಚ ಹಿಡಿದು, ಅರಮನೆಯ ಗೋಡೆಗೆ ಸುಣ್ಣ ಬಳಿಯುತ್ತಿದ್ದರು. ಗಣಕರು ಲಗ್ನ ಗುಣಗಳನ್ನು ಗುಣಿಸುತ್ತಿದ್ದರು. 'ಮಕರಿ ಮುಖ ಪ್ರಣಾಲಿ'ಗಳೆಂಬ

ಮೊಸಳೆಯ ಮುಖದ ಆಕಾರದಲ್ಲಿ ಕೊನೆಯಾಗುವ ನಾಲೆಗಳ ಮೂಲಕ ಗಂಧೋದಕವು ಹರಿದು ಅನೇಕ ಕ್ರೀಡಾವಾಪಿಗಳನ್ನು ತುಂಬುತ್ತಿತ್ತು. ಹೊರ ಅಂಗಳದಲ್ಲಿ ಹೇಮಕಾರರು ಚಿನ್ನ ಕುಟ್ಟುತ್ತಿದ್ದರು. ಚಿತ್ರಕಾರರು ಗೋಡೆಗಳ ಮೇಲೆ ಮಂಗಳದೃಶ್ಯಗಳನ್ನು ಬರೆಯುತ್ತಿದ್ದರು. ಅನೇಕ ಜನ ಲೇಪ್ಯಕಾರರು ಮಣ್ಣಿನಿಂದ ಮೀನು, ಆಮೆ, ಮೊಸಳೆ, ತೆಂಗು, ಬಾಳೆ, ಅಡಿಕೆಮರಗಳನ್ನು ರಚಿಸುತ್ತಿದ್ದರು. ದೊರೆಗಳು ತಾವೂ ದಟ್ಟಿಯನ್ನು ಎತ್ತಿ ಕಟ್ಟಿ, ಸ್ವಾಮಿಯು ನೇಮಿಸಿದ ಶುಭಕಾರ್ಯಗಳನ್ನು ಮಾಡುತ್ತಿದ್ದರು: ಸಿಂಧೂರ ಕುಟ್ಟಿಮ ಭೂಮಿಯನ್ನು ತಿಕ್ಕಿ ಹೊಳಪು ಕೊಡುತ್ತಿದ್ದರು; ಆತರ್ಪಣವೆಂಬ ಬಣ್ಣದಿಂದ ನೆಲವನ್ನು ಅಲಂಕರಿಸುತ್ತಿದ್ದರು. ಸಾಮಂತರಾಜರ ಸೀಮಂತಿನಿಯರು ಕೆಲವರು ವಧೂವರರನ್ನು ಕುರಿತು ಹಾಡುತ್ತಿದ್ದರು; ಕೆಲವರು ಗ್ರೀವಾಸೂತ್ರಗಳಿಗೆ ಬೇರೆ ಬೇರೆ ಬಣ್ಣಗಳನ್ನು ಹಚ್ಚುತ್ತಿದ್ದರು; ಕೆಲವರು ಚಿತ್ರ ಪತ್ರ ಲತೆಗಳನ್ನು ಬರೆಯಬಲ್ಲ ತಮ್ಮ ಕುಶಲತೆಯಿಂದ ಕಲಶಗಳನ್ನು ಚಿತ್ರಿಸುತ್ತಿದ್ದರು; ಕೆಲವರು ಮದುವೆಯ ಕಂಕಣಕ್ಕಾಗಿ ಉಣ್ಣೆಯ ನೂಲಿಗೆ ಬಣ್ಣ ಹಾಕುತ್ತಿದ್ದರು; ಕೆಲವರು, ಬಲಾಶನಘೃತದಿಂದ ಘನೀಕೃತವಾಗಿ, ಉಪಯೋಗಿಸುವವರ ಲಾವಣ್ಯವನ್ನು ಹೆಚ್ಚಿಸುವ, ಕುಂಕುಮಕಲ್ಕ ಮಿಶ್ರಿತವಾದ ಮುಖಾಲೇಪನವನ್ನು ತಯಾರಿಸುತ್ತಿದ್ದರು; ಕೆಲವರು ಕಕ್ಕೋಲ ಫಲಗಳೊಡನೆ ಜಾಯಿಕಾಯಿ ಸೇರಿಸಿ, ನಡುನಡುವೆ ಥಳಿಸುವ ಸ್ಫಟಿಕ ಕರ್ಪೂರವನ್ನು ಬೆರೆಸಿ, ಲವಂಗಮಾಲೆಗಳನ್ನು ರಚಿಸುತ್ತಿದ್ದರು.

ಅರಮನೆಯಲ್ಲಿ ಹರಡಿದ್ದ ತೆರತೆರದ ಬಟ್ಟೆಗಳನ್ನು ಕಂಡರೆ ಸಾವಿರಾರು ಕಾಮನಬಿಲ್ಲಿನ ನೆನಪಾಗುತ್ತಿತ್ತು. ಕ್ಷೌಮ, ಬಾದರ, ದುಕೂಲ, ಲಾಲಾತಂತುಜ, ಅಂತುಕ, ನೇತ್ರ ಎಂಬ ತರತರದ ಬಟ್ಟೆಗಳು ಅಲ್ಲಿದ್ದುವು. (ಅವುಗಳಲ್ಲಿ ಲಾಲಾತಂತುಜವೆಂಬುದು ಜೇಡರಹುಳುವಿನ ನೂಲಿನಿಂದ ನೆಯಿದ ನವುರುಬಟ್ಟೆ.) ಆ ಬಟ್ಟೆಗಳು ಹಾವಿನ ಪರೆಯಂತಿದ್ದುವು, ಹಣ್ಣಾಗದ ಬಾಳೆಯಂತೆ ಕೋಮಲವಾಗಿದ್ದುವು, ಉಸುರಾಡಿದರೆಯೇ ಹಾರುತ್ತಿದ್ದುವು, ಸ್ಪರ್ಶಕ್ಕೆ ಮಾತ್ರ ಗೋಚರವಾಗಿದ್ದುವು. ಅವುಗಳನ್ನು ಪುರಂಧ್ರಿಯರು ಅನೇಕ ತೆರಗಳಲ್ಲಿ ಅಳೆದು ಕತ್ತರಿಸುತ್ತಿದ್ದರು. ರಜಕರು

ಅವುಗಳಿಗೆ ಬಣ್ಣ ಹಾಕುತ್ತಿದ್ದರು. ಸೇವಕರು ಅವುಗಳನ್ನು ಒದರಿ, ನೆರಳಲ್ಲಿ ಒಣಗಿಸುತ್ತಿದ್ದರು. ಅಲ್ಲದೆ, ತಮ್ಮ ಉಜ್ವಲವಾದ ಗೌಸಣಿಗೆಗಳಿಂದ ಹಂಸಗಳನ್ನೂ ನಾಚಿಸುವ ಶಯನಾಸನಗಳು; ನಕ್ಷತ್ರಗಳ ಹಾಗಿರುವ ಮುತ್ತುಗಳು ಮೆಟ್ಟಿದ ಕಂಚುಕಗಳು; ಅನೇಕ ಉಪಯೋಗಗಳಿಗಾಗಿ ಚೂರುಮಾಡಿದ ಅಪರಿಮಿತವಾದ ಬಟ್ಟೆಗಳು; ಹೊಸದಾಗಿ ಬಣ್ಣ ಹಾಕಿ, ನುಣುಪಾದ ದುಕೂಲದಿಂದಾದ ಪಟವಿತಾನಗಳು; ಮಂಟಪಗಳು; ಚಿತ್ರ ಚಿತ್ರವಾದ 'ನೇತ್ರ' ನೆಂಬ ಬಟ್ಟೆಗಳು ಸುತ್ತಿದ ಕಂಬಗಳು;—ಇವುಗಳಿಂದ ಆ ಅರಮನೆಯು ಉಜ್ವಲವಾಗಿತ್ತು, ರಮಣೀಯವಾಗಿತ್ತು, ಉತ್ಸುಕತೆಯನ್ನು ಕೆರಳಿಸುತ್ತಿತ್ತು, ಮಂಗಲವನ್ನು ಎರಚುತ್ತಿತ್ತು.

* * * *

ರಾಜ್ಯವರ್ಧನನು ಮಾಳವದವರಮೇಲೆ ದಂಡೆತ್ತಿ ನಡೆದು ಅವರನ್ನು ಸೋಲಿಸಿ, ಅನೇಕ ಆನೆಕುದುರೆಗಳನ್ನೂ ವಾರವಿಲಾಸಿನಿಯರನ್ನೂ ಪರಿಜನರನ್ನೂ ಸೆರೆಹಿಡಿದನು. ಅಲ್ಲದೆ, ಕಾಮನಬಿಲ್ಲಿನಂತೆ ತರತರದ ಬಣ್ಣಗಳ ಮಾಲೆಯನ್ನು ಎರಚುತ್ತಿದ್ದ ವಿಧ ವಿಧವಾದ ಆಭರಣಗಳು; ಸೊಗಸಾದ ಮುತ್ತಿನ ಹಾರಗಳು; ಬಾಲವ್ಯಜನಗಳು; ಚಿನ್ನದ ನಾಳವುಳ್ಳ ಶ್ವೇತಚ್ಛತ್ರ; ಸಿಂಹಾಸನ, ಶಯನ, ಆಸಂದಿ ಮೊದಲಾದ ರಾಜ್ಯೋಪಕರಣಗಳು; ಅಲಂಕಾರಗಳೆಲ್ಲವೂ ತುಂಬಿ ಅವುಗಳ ಪಟ್ಟಿಯನ್ನೂ ಬರೆದಿಟ್ಟಿದ್ದ ಕೋಶಕಲಶಗಳೆಂಬ ಪೆಟ್ಟಿಗೆಗಳು—ಎಲ್ಲವನ್ನೂ ಅವನು ತಂದನು.

* * * *

ದೊರೆಯು ಜ್ವರದ ತಾಪದಿಂದ ನರಳುತ್ತಿದ್ದನು. ಆ ತಾಪವನ್ನು ತಗ್ಗಿಸಲು ವೈದ್ಯರು ಹೇಳಿದ ಪಥ್ಯಾಹಾರಗಳನ್ನು ಅಡುಗೆಯವನು ತಯಾರಿಸುತ್ತಿದ್ದನು. ಒಂದು ಕಡೆ, ಮಂಜಿನಗಡ್ಡೆಯ ಪುಡಿಯ ನಡುವೆ ಪಾತ್ರೆಗಳಲ್ಲಿ ಮಜ್ಜಿಗೆ ಕೊರೆಯುತ್ತಿತ್ತು. ಇನ್ನೊಂದುಕಡೆ, ಕರ್ಪೂರ ಚಿಮುಕಿಸಿದ ಬಿಳಿಯ ತೊಯ್ದ ಬಟ್ಟೆಯೊಳಗೆ ಅಂಜನವು ಶೀತಲವಾಗುತ್ತಿತ್ತು. ಹೊಸ ಭಾಂಡಕ್ಕೆ ಆರ್ದ್ರವಾದ ಮಣ್ಣನ್ನು ಸವರಿ, ಹಾಲು ಒಡೆದು ಪಡೆದ ನೀರನ್ನು ಅದರೊಳಗೆ ತಣ್ಣಗಾಗಿಸುತ್ತಿದ್ದರು. ಕೋಮಲವಾದ ಕಮಲದೆಲೆಗಳು ಮುಚ್ಚಿದ ಮೃಣಾಳಗಳಿಂದ ನೀರು

ಜಿನುಗುತ್ತಿತ್ತು. ಕೆಳಗೆ, ನೀರು ಕುಡಿಯುವ ಪಾತ್ರೆಗಳ ಪಕ್ಕದಲ್ಲಿ, ನಾಳಗಳೊಡಗೂಡಿದ ನೀಲೋತ್ಪಲಗಳು ಬಿದ್ದಿದ್ದುವು. ಕಾಯ್ದ ನೀರನ್ನು ಪಾತ್ರೆಯಿಂದ ಪಾತ್ರೆಗೆ ಧಾರಾಕಾರವಾಗಿ ಸುರಿದು ಆರಿಸುತ್ತಿದ್ದರು.

*　　*　　*　　*

ಹರ್ಷನು ವಿಜಯಪ್ರಯಾಣಕ್ಕೆ ಹೊರಟಾಗ ಚಿನ್ನ ಬೆಳ್ಳಿಯ ಪಾತ್ರೆಗಳಲ್ಲಿ ಸ್ನಾನಮಾಡಿದನು. ಬ್ರಾಹ್ಮಣರಿಗೆ ಅನರ್ಘವಾದ ರತ್ನ ಚಿನ್ನಬೆಳ್ಳಿಗಳನ್ನು ಸಾವಿರಗಟ್ಟಲೆಯಾಗಿ ದಾನಮಾಡಿದನು ; ಗೊರಸಿಗೂ ಕೊಂಬಿನ ತುದಿಗೂ ಚಿನ್ನದ ರೇಕಿನಿಂದ ಅಲಂಕರಿಸಿದ ಅಸಂಖ್ಯಾತವಾದ ಗೋಗಳನ್ನೂ ದಾನಮಾಡಿದನು. ಆಗ ಅವನು ಕುಳಿತಿದ್ದುದು ಹುಲಿಯ ಚರ್ಮ ಹಾಸಿದ ಸಿಂಹಾಸನದ ಮೇಲೆ. ಎರಡು ರಾಜಹಂಸಗಳಂತೆ ಶೋಭಿಸುತ್ತಿದ್ದ ಎರಡು ಬಿಳಿಯ ದುಕೂಲ ಅವನ ಮೈಮೇಲಿತ್ತು.

*　　*　　*　　*

ಬಾಣನು ಹರ್ಷನನ್ನು ಕಾಣಬೇಕೆಂದು ಬಂದಾಗ, ಚಕ್ರವರ್ತಿಯು ಕುಳಿತಿದ್ದ ಪೀಠವು ಹರಿತಚಂದನ ರಸದಿಂದ ತೊಳೆದ ಮುತ್ತಿನಂತೆ ಶುಭ್ರವಾಗಿದ್ದ ಶಿಲೆಯಿಂದಾದುದು ; ಅದು ಮುಟ್ಟಿದರೆ ಮಂಜಿನ ನೀರಿನಂತೆ ಶೀತಲವಾಗಿತ್ತು. ಅದರ ದಂತದ ಪಾದಗಳು ಚಂದ್ರನಂತಿದ್ದುವು. ಅವನ ಕಾಲಿನ ಕೆಳಗಿದ್ದ ಪಾದಪೀಠವು ನೀಲಮಣಿಯಿಂದಾಗಿತ್ತು ; ಅದರ ಸುತ್ತ ಮಹಾರ್ಹವಾದ ಮಾಣಿಕ್ಯಗಳ ಮೇಖಲೆಯಿತ್ತು.

*　　*　　*　　*

ಪುಸ್ತಕವಾಚಕನಾದ ಸುದೃಷ್ಟಿಯೆಂಬ ಬ್ರಾಹ್ಮಣನನ್ನು ಬಾಣನು ಹೀಗೆ ವರ್ಣಿಸಿದ್ದಾನೆ: ಅವನ ಪೌಂಡ್ರ ವಸ್ತ್ರಗಳು ನವಿಲಿನ ಕಡೆಗಣ್ಣಿನಂತೆ ಪಾಂಡುರವಾಗಿದ್ದುವು. ಸ್ನಾನಮಾಡಿ ಬಂದ ತೀರ್ಥದ ಮೃತ್ತಿಕೆಯಿಂದಲೂ ಗೋರೋಚನದಿಂದಲೂ ಅವನು ತಿಲಕವಿಟ್ಟುಕೊಂಡಿದ್ದನು. ತೈಲಾಮಲಕದಿಂದ ತಲೆಯನ್ನು ಬಾಚಿ, ಹೂಗೊಂಚಲನ್ನು ಚೂಡಾಮಣಿಯಂತೆ ಧರಿಸಿದ್ದನು. ಎಲೆಯಡಿಕೆ ಹಾಕಿ ತುಟಿ ಕೆಂಪಾಗಿತ್ತು. ಅಂಜನ ಹಚ್ಚಿ ಕಣ್ಣು ಬೆಳಗುತ್ತಿತ್ತು. ಅವನು ಅಲ್ಲಿಯ

ಆಸಂದಿಯೆಂಬ ಪೀಠದ ಮೇಲೆ ಕುಳಿತು, ಜೊಂಡಿನ ಶಲಾಕಾಯಂತ್ರವನ್ನು ಮುಂದಿಟ್ಟುಕೊಂಡು, ಅದರ ಮೇಲೆ ಕಟ್ಟುಬಿಚ್ಚಿ ಪುಸ್ತಕವನ್ನಿಟ್ಟಿದ್ದನು.

* * * *

ಭಾಸ್ಕರವರ್ಮನು ಹರ್ಷನ ಮೈತ್ರಿಯನ್ನು ಬಯಸಿ, ಅನೇಕ ಪ್ರಾಭೃತಗಳನ್ನು ಕಳುಹಿಸಿದನಷ್ಟೆ. ಅವುಗಳಲ್ಲಿ ಮುಖ್ಯವಾದುದು ಬಿಳಿಯ ದುಕೂಲದ ಹೊದಿಕೆಯಲ್ಲಿ ಕಳುಹಿಸಿದ ರತ್ನಾಂಚಿತವಾದ ಶ್ವೇತಚ್ಛತ್ರ. ಅದಲ್ಲದೆ, ತಮ್ಮ ರತ್ನಗಳ ಕಾಂತಿಯಿಂದ ದಿಕ್ಕುಗಳನ್ನು ಕೆಂಪಗೆ ಮಾಡುವ ಅನೇಕ ಅಲಂಕರಣಗಳು; ಥಳಥಳಿಸುವ ಚೂಡಾಮಣಿಗಳು; ಮುತ್ತಿನ ಹಾರಗಳು; ಬಣ್ಣ ಬಣ್ಣಗಳ ಬೆತ್ತದ ಕೊಳಬೆಗಳಲ್ಲಿ ಸುತ್ತಿ ಕಳುಹಿಸಿದ ಬಿಳಿಯ ಕ್ಷೌಮಗಳು; ಮುತ್ತಿನ ಚಿಪ್ಪು, ಶಂಖದ ಚಿಪ್ಪು, ಮಾಣಿಕ್ಯಗಳಿಂದಾಗಿ, ಕುಶಲಿಗಳಾದ ಶಿಲ್ಪಿಗಳು ಚಿತ್ರಗಳಿಂದ ಬರೆದ ಪಾನಪಾತ್ರೆಗಳು; ಬಗೆಬಗೆಯ ಬಣ್ಣಗಳಿಂದ ಅಂಚುಕಟ್ಟಿ, ಚಿನ್ನದ ರೇಕುಗಳಿಂದ ನಕಾಸೆ ಕೆಲಸಮಾಡಿ, ಅದು ಮಾಸದಂತೆ ಮೃದುವಾದ ಗೌಸಣಿಗೆಗಳಲ್ಲಿಟ್ಟ ಕಾರ್ದರಂಗ ಚರ್ಮದ ಸಾಮಾನುಗಳು; ಭೂರ್ಜಪತ್ರದಂತೆ ಕೋಮಲವಾದ ನಡುಪಟ್ಟಿಗಳು; ಸಮೂರಕವೆಂಬ ಜಿಂಕೆಯ ಚರ್ಮದ ತಲೆದಿಂಬುಗಳು; ಚಿತ್ರವಾದ ಇತರ ನೆಯಿಗೆ ಕೆಲಸಗಳು; ಹಳದಿಯ ಬಣ್ಣದ ಬೆತ್ತದ ಪೀಠಗಳು; ಅಗುರುವಲ್ಕಲದಿಂದ ಮಾಡಿ, ಅನೇಕ ಸುಭಾಷಿತಗಳನ್ನು ಬರೆದ ಪುಸ್ತಕಗಳು; ಉತ್ತಮ ಜಾತಿಯ ಅಡಿಕೆ ದಪ್ಪವಾದ ಬಿದಿರುಕೊಳವೆಗಳಲ್ಲಿ ತುಂಬಿ ಬಂದ ಮಾವಿನ ರಸ ಮತ್ತು ಕೃಷ್ಣಾಗುರು ತೈಲ; ರೇಷ್ಮೆಯ ಚೀಲಗಳಲ್ಲಿ ಕಟ್ಟಿ ಬಂದ, ಅಂಜನದಂತೆ ಕಪ್ಪಾದ ಕೃಷ್ಣಾಗುರು; ಎಂತಹ ಪರಿತಾಪವನ್ನಾದರೂ ಹೋಗಲಾಡಿಸುವ ಗೋಶೀರ್ಷಚಂದನ; ತುಷಾರಶಿಲಾಶಕಲಗಳಂತೆ ಸ್ವಚ್ಛವಾದ ಕರ್ಪೂರ; ಕಸ್ತೂರಿಯ ಕೋಶಗಳು, ಕಕ್ಕೋಲಪಲ್ಲವಗಳು, ಲವಂಗಪುಷ್ಪಮಂಜರಿಗಳು, ಜಾಯಿಕಾಯಿ ರಾಶಿಗಳು; ಅತಿಮಧುರವಾದ ಉಲ್ಲಕವೆಂಬ ಪಾನೀಯ; ಬಿಳಿಯ ಕರಿಯ ಚಾಮರಗಳು; ಚಿತ್ರ ಬರೆಯಲು ಫಲಕಗಳು, ತೂಲಿಕೆಗಳು, ಬಣ್ಣ ತುಂಬಲು ಚಿತ್ರವಾದ ಸಂಪುಟಗಳು;

ಕಿನ್ನರಗಳೆಂಬ ಕೋತಿಗಳು; ಕಾಡುಕಪಿಗಳು; ಜೀವಂಜೀವಕ ಪಕ್ಷಿಗಳು; ಜಲಮನುಷ್ಯರು; ಕಸ್ತೂರಿಕಾಕುರಂಗಗಳು; ಚಮರೀಮೃಗಗಳು; ಚಿನ್ನದಬಣ್ಣ ಹಾಕಿದ ಬೆತ್ತದ ಪಂಜರಗಳಲ್ಲಿ ಸೇರಿ, ಸೊಗಸಾಗಿ ಮಾತನಾಡುವ ಶುಕಶಾರಿಕಾದಿ ಪಕ್ಷಿಗಳು; ಹವಳದ ಪಂಜರಗಳಲ್ಲಿ ಚಕೋರಗಳು; ನೀರಾನೆಗಳ ದಂತದ ಉಂಗುರಗಳು, ಅದರ ಮೇಲೆ ಆನೆಯ ಕುಂಭಸ್ಥಳದಿಂದ ತೆಗೆದ ಮುತ್ತಿನ ಸಾಲುಗಳು;—ಇವುಗಳನ್ನು ಭಾಸ್ಕರವರ್ಮನು ಕಳುಹಿಸಿದನು.

* * * *

ಮೇಲೆ ಕೊಟ್ಟಿರುವ ಕೆಲವು ಚಿತ್ರಗಳಿಂದ ಆ ಕಾಲದ ಕಲೆ ಕೈಗಾರಿಕೆ ಯಾವ ಸ್ಥಿತಿಯಲ್ಲಿದ್ದುವೆಂದು ಕಾಣುವುದು. ಅಲ್ಲದೆ, ಆ ಕಾಲದಲ್ಲಿ ಚಿತ್ರಸಂಗ್ರಹಶಾಲೆಗಳು, ನಾಟಕಕ್ಕೆ ನಾಟಕಶಾಲೆಗಳು, ನೃತ್ಯಸಂಗೀತಗಳಿಗೆ ಗಂಧರ್ವಶಾಲೆಗಳು ಇದ್ದುವೆಂದು ಹುಯೆನ್‌ತ್ಸಾಂಗನು ಹೇಳಿದ್ದಾನೆ. ಚಿನ್ನ, ಬೆಳ್ಳಿ, ಶಿಲೆಗಳಲ್ಲಿ ಅನೇಕ ಕುಶಲಕಾರ್ಯ ನಡೆಯುತ್ತಿತ್ತು. ಸ್ಫಟಿಕದಿಂದ ಭೂತಕನ್ನಡಿಗಳನ್ನು ತಯಾರಿಸುತ್ತಿದ್ದರು. ಹರ್ಷನು ಮಾಡಿಸಿದ ಬುದ್ಧನ ಬಂಗಾರದ ವಿಗ್ರಹವೂ ಆತನು ಎತ್ತಿಸಿದ ನೂರು ಅಡಿಯೆತ್ತರದ ವಿಹಾರವೂ ಆಗಿನ ಕಲೆಗೆ ಮತ್ತು ಆರ್ಥಿಕ ಸ್ಥಿತಿಗೆ ಸಾಕಾದಷ್ಟು ನಿದರ್ಶನವಾಗಿದೆ. ಹುಯೆನ್‌ತ್ಸಾಂಗನು ಹಿಂದೂದೇಶದಿಂದ ಹಿಂದಿರುಗುವಾಗ ಪುಸ್ತಕಗಳನ್ನು ಮಾತ್ರವಲ್ಲದೆ, ಬುದ್ಧನ ಅನೇಕ ಪ್ರತಿಮೆಗಳನ್ನೂ ಕೊಂಡು ಹೋದನು. ಅವುಗಳಲ್ಲಿ ಚಿನ್ನ, ಬೆಳ್ಳಿ, ಗಂಧದ ಮರಗಳವೇ ಬಹಳವಾಗಿತ್ತು!

## ಆಗಿನ ಜನಜೀವನ

ಆಗಿನ ಸಮಾಜವು ಎಂದಿನಂತೆ ವರ್ಣಾಶ್ರಮಧರ್ಮಕ್ಕನುಸಾರವಾಗಿ ನಾಲ್ಕು ಪಂಗಡವಾಗಿತ್ತು. ಬ್ರಾಹ್ಮಣರು ತಮ್ಮ ನಿತ್ಯಕರ್ಮಗಳಲ್ಲಿ ನಿರತರಾಗಿ ಅಧ್ಯಾತ್ಮಕ್ಕೆ ಹೆಚ್ಚು ಗಮನ ಕೊಡುತ್ತಿದ್ದರು. ಕ್ಷತ್ರಿಯರು ರಾಜ್ಯಪಾಲನೆಯ ಭಾರವನ್ನು ವಹಿಸಿಕೊಂಡಿದ್ದರು. ವೈಶ್ಯರು ಸ್ವದೇಶ ಪರದೇಶಗಳ ವ್ಯಾಪಾರವನ್ನು ನಡೆಸುತ್ತಿದ್ದರು. ನಾಡಿನ ವ್ಯವಸಾಯ ಕರ್ಮವೆಲ್ಲ ಶೂದ್ರರ ಕೈಲಿತ್ತು. ಈ ನಾಲ್ಕು ಪಂಗಡಗಳಲ್ಲಿ

ಪರಸ್ಪರ ಹೆಣ್ಣು ಕೊಟ್ಟು ತರುವ ಪದ್ಧತಿಯಿರಲಿಲ್ಲ. ಆದರೂ ಜಾತಿ ಮತ ಲಿಂಗಭೇದಗಳನ್ನು ಎಣಿಸದೆ ಸಹವಾಸ ಸಹಚರ್ಯೆ ಮಾಡಿದರೂ ಯಾರ ಆಕ್ಷೇಪವೂ ಇರಲಿಲ್ಲ. ಸದ್ವಂಶದಲ್ಲಿ ಜನಿಸಿದ ಬಾಣನಂತಹ ಬ್ರಾಹ್ಮಣನು ಚಿಕ್ಕಂದಿನಲ್ಲಿ ಯಾರ ಸಂಗದಲ್ಲಿದ್ದನು ನೋಡಿ: ಒಬ್ಬ ಅಕ್ಕಸಾಲೆ, ಒಬ್ಬ ಚಿತ್ರಕಾರ, ಒಬ್ಬಳು ಸೈರಂಧ್ರಿ, ಒಬ್ಬಳು ಸಂನ್ಯಾಸಿನಿ ಯಾದ ವಿಧವೆ, ನರ್ತಕ ನರ್ತಕಿಯರಿಬ್ಬರು, ದಿಗಂಬರ ಜೈನನೊಬ್ಬ, ಕುಂಬಾರನೊಬ್ಬ, ಒಬ್ಬ ಶೈವಸಂನ್ಯಾಸಿ, ಒಬ್ಬ ಐಂದ್ರಜಾಲಿಕ—ಇವರು ಬಾಣನ ಸಂಗಡಿಗರಲ್ಲಿ ಕೆಲವರು.

ಆಗಿನವರು ದೇಹನೈರ್ಮಲ್ಯಕ್ಕೆ ಬಹಳ ಗಮನ ಕೊಡುತ್ತಿದ್ದರು. ಅವರು ಊಟಕ್ಕೆ ಮುಂಚೆ ಸ್ನಾನಮಾಡಿಯೇ ತೀರುವರು; ಒಬ್ಬರು ತಿಂದು ಮಿಕ್ಕುದನ್ನು ಬೇರೆಯವರು ತಿನ್ನುತ್ತಿರಲಿಲ್ಲ. ಅಡುಗೆಗೆ ಬಳಸಿದ ಪಾತ್ರೆಗಳು ಮರದ್ದೋ ಮಣ್ಣಿನದೋ ಆಗಿದ್ದರೆ, ಕೆಲಸವಾದ ಮೇಲೆ ಅವುಗಳನ್ನು ಬಿಸಾಡುತ್ತಿದ್ದರು; ಆ ಪಾತ್ರೆಗಳು ಚಿನ್ನ, ಬೆಳ್ಳಿ, ತಾಮ್ರ, ಕಬ್ಬಿಣ ಮುಂತಾದ ಲೋಹಗಳಿಂದ ಆಗಿದ್ದರೆ, ಅವುಗಳನ್ನು ತಿಕ್ಕಿ ತೊಳೆದಿಡುತ್ತಿದ್ದರು. ಸಾಮಾನ್ಯವಾಗಿ ಆಗಿನ ಆಹಾರವೆಂದರೆ ಹಾಲು, ತುಪ್ಪ, ಸಕ್ಕರೆ, ಬೆಲ್ಲ, ದ್ವಿದಳಧಾನ್ಯಗಳು, ಎಣ್ಣೆ, ಮುಂತಾದುವು. ಕೆಲವರು ಮೀನು ತಿನ್ನುತ್ತಿದ್ದರು. ಕುರಿ, ಜಿಂಕೆ ಎರಡರ ಮಾಂಸವಲ್ಲದೆ ಬೇರೆ ಎಲ್ಲ ಮಾಂಸವೂ ನಿಷಿದ್ಧವಾಗಿತ್ತು. ಈರುಳ್ಳಿ ಬೆಳ್ಳುಳ್ಳಿಗಳನ್ನು ಬಹಳ ಸ್ವಲ್ಪ ಜನ ಉಪಯೋಗಿಸುತ್ತಿದ್ದರು; ಅಂತಹವರನ್ನು ಸಮಾಜ ದಿಂದ ಹೊರಗಿರಿಸುತ್ತಿದ್ದರು.

ಆ ಕಾಲದಲ್ಲಿ ಸ್ತ್ರೀ ವಿದ್ಯಾಭ್ಯಾಸವು ಪ್ರಚಾರದಲ್ಲಿತ್ತು. ರಾಜ್ಯ ಶ್ರೀಯು ಮದುವೆಯಾಗುವ ವಯಸ್ಸಿಗೆ ಮುಂಚೆಯೇ ನೃತ್ಯಗೀತಾದಿ ವಿದ್ಯೆಗಳಲ್ಲಿ ಪ್ರವೀಣೆಯಾಗಿದ್ದಳು; ಮುಂದೆ, ದಿವಾಕರಮಿತ್ರನ ಕೈ ಕೆಳಗೆ ವಿದ್ಯಾರ್ಥಿನಿಯಾಗಿ, ಹುಯೆನ್‌ತ್ಸಾಂಗನು ಮಹಾಯಾನವನ್ನು ಕುರಿತು ಮಾಡಿದ ಭಾಷಣವನ್ನು ಅರ್ಥಮಾಡಿಕೊಳ್ಳುವಷ್ಟು ವಿದ್ಯಾ ಪ್ರೌಢಿಮೆಯನ್ನು ಸಂಪಾದಿಸಿದ್ದಳು. ಆ ಕಾಲದಲ್ಲಿ ಸ್ತ್ರೀಯರು ಧರ್ಮ ವಿದ್ಯೆಯಲ್ಲಿ ಪಂಡಿತರಾಗಿ ತಾವೂ ಸಂನ್ಯಾಸಿನಿಯರಾಗುತ್ತಿದ್ದರೆಂದು

ಬಾಣನ ಕಾದಂಬರಿಯೆಂಬ ಗ್ರಂಥದಿಂದ ಗೊತ್ತಾಗುತ್ತದೆ. ಸ್ತ್ರೀಯರಿಗೆ ಚಿತ್ರಕಲಾನೈಪುಣ್ಯವನ್ನು ಕಲಿಸಲು ಚಿತ್ರಶಾಲೆಗಳೂ, ಸಂಗೀತ ಕಲಿಸಲು ಗಂಧರ್ವಶಾಲೆಗಳೂ ಇದ್ದುವೆಂದು ಹರ್ಷನ ನಾಟಕಗಳಿಂದ ತಿಳಿದು ಬರುವುದು.

ಸ್ತ್ರೀಯರು-ಅಂತಃಪುರದವರು ಕೂಡ-ಅವಕುಂಠನವನ್ನು ಧರಿಸುತ್ತಿರಲಿಲ್ಲ. ವರ್ಧನ ರಾಜಕುಮಾರಿಯೂ ಕನ್ಯಾಕುಬ್ಜದ ಅರಸಿಯೂ ಆದ ರಾಜ್ಯಶ್ರೀದೇವಿಯು ವಿಂಧ್ಯಾರಣ್ಯದಲ್ಲಿ ಅಲೆಯುತ್ತಿರುವಾಗ ಅವಳಿಗೆ ಮುಚ್ಚುಮರೆಯೆಲ್ಲಿತ್ತು ? ಅಲ್ಲದೆ, ಆಮೇಲೆ ಹುಯೆನ್‌ತ್ಸಾಂಗನ ಧರ್ಮ ಕಥನವನ್ನು ಕೇಳಿ ಕೀರ್ತಿಸುವಾಗ ಆಕೆಯು ದೊರೆಯ ಹಿಂದೆಯೇ ಬಹಿರಂಗವಾಗಿ ಕುಳಿತಿದ್ದಳು.

ಆ ಕಾಲದ ವಿಧವೆಯರು ಪುನರ್ವಿವಾಹ ಮಾಡಿಕೊಳ್ಳುತ್ತಿರಲಿಲ್ಲವೆಂದು ಹುಯೆನ್‌ತ್ಸಾಂಗನು ಹೇಳಿದ್ದಾನೆ. ಸತಿ ಅಥವ ಸಹಗಮನವು ಆಗಿನ ಹೆಂಗಸರಲ್ಲಿ ವಾಡಿಕೆಯಲ್ಲಿತ್ತು. ಯಶೋವತೀ ದೇವಿಯು ಪತಿಯ ಮರಣಕ್ಕೆ ಮುಂಚೆ ಅಗ್ನಿಪ್ರವೇಶ ಮಾಡಿದುದೂ, ರಾಜ್ಯಶ್ರೀಯು ಗ್ರಹವರ್ಮನ ಮರಣಾನಂತರ ಸತಿಯನ್ನಾಚರಿಸಲು ತೊಡಗಿ ಹರ್ಷನಿಂದ ರಕ್ಷಿಸಲ್ಪಟ್ಟುದೂ ತಿಳಿದ ವಿಷಯವೆ. ಹೀಗೆ, ರಾಜ್ಯಕ್ಕೆ ಆದರ್ಶಪ್ರಾಯರಾಗಿರಬೇಕಾದವರ ಆಚರಣೆಯ ಪ್ರಭಾವವು ರಾಜ್ಯದ ಪ್ರಜೆಗಳ ಜೀವನವನ್ನೂ ತನ್ನಂತೆಯೇ ತಿರುವುತ್ತಿತ್ತೆಂಬುದರಲ್ಲಿ ಏನೂ ಸಂದೇಹವಿಲ್ಲ.

## ಆಗಿನ ಸಂಸ್ಕೃತಿಯ ಪ್ರಸಾರ

ಹರ್ಷನ ಕಾಲದಲ್ಲಿ ಸಮುದ್ರಯಾನವು ನಿಷಿದ್ಧವಾಗಿರಲಿಲ್ಲ; ಉಚ್ಛ್ರಾಯಸ್ಥಿತಿಯಲ್ಲಿತ್ತು. ಹರ್ಷನು ಕ್ರಿ. ಶ. ೬೪೧ ರಲ್ಲಿ ಒಬ್ಬ ಬ್ರಾಹ್ಮಣ ರಾಯಭಾರಿಯನ್ನು ಚೀನಕ್ಕೆ ಸಮುದ್ರದ ಮೇಲೆ ಕಳುಹಿಸಿದನೆಂದು ಹಿಂದೆ ಹೇಳಿದೆ. ಹುಯೆನ್‌ತಾಂಗನು ಹಿಂದೂದೇಶದಿಂದ ಚೀನಕ್ಕೆ ಹಿಂದಿರುಗುವಾಗ, ಅವನು ದಕ್ಷಿಣದ ಸಮುದ್ರಮಾರ್ಗವಾಗಿ ಹೋಗುವುದಾದರೆ ತನ್ನ ಅಧಿಕಾರಿಗಳನ್ನು ಜೊತೆಗೆ ಕಳುಹಿಸುತ್ತೇನೆಂದು ಹರ್ಷನು

ನುಡಿದನು. ಅದರಿಂದ ಆ ಸಮುದ್ರಮಾರ್ಗವು ಅವರಿಗೆ ಅಪರಿಚಿತವಾಗಿರಲಿಲ್ಲವೆಂದು ತಿಳಿದು ಬರುವುದು.

ಜವ ಮತ್ತು ಸುಮತ್ರ ದ್ವೀಪಗಳ ಹೆಸರು ಎಲ್ಲರಿಗೂ ಗೊತ್ತು. ಜವದ್ವೀಪದ ಇತಿಹಾಸದ ಪ್ರಕಾರ, ಕ್ರಿ. ಶ. ಏಳನೆಯ ಶತಮಾನದ ಆರಂಭದಲ್ಲಿ ೫,೦೦೦ ಹಿಂದೂ ಜನರು ಜವದ್ವೀಪಕ್ಕೆ ತೆರಳಿ ನೆಲಸಿದರು. ಅವರಲ್ಲಿ ಕೆಲವರು ಯೋಧರು; ಕೆಲವರು ಕೆಲಸಗಾರರು; ಬರಹಗಾರರು ಕೆಲವರು; ವೈದ್ಯರು ಕೆಲವರು; ಬೇಸಾಯಗಾರರು ಅನೇಕರು. ಅವರು ಆರು ದೊಡ್ಡ ಹಡಗುಗಳನ್ನೂ ನೂರು ಸಣ್ಣ ಹಡಗುಗಳನ್ನೂ ಹತ್ತಿ ಗುಜರಾತಿನ ಕಡೆಯಿಂದ ಹಿಂದೂದೇಶವನ್ನು ಬಿಟ್ಟವರು. ಅವರನ್ನು ಹಿಂಬಾಲಿಸಿ ಇನ್ನೂ ಎರಡು ಸಾವಿರ ಹಿಂದೀಯರು—ಮುಖ್ಯವಾಗಿ ಕಲ್ಲು ಹಿತ್ತಾಳೆಗಳಲ್ಲಿ ಸೊಗಸಾದ ಕೆಲಸ ಮಾಡುವ ಶಿಲ್ಪಿಗಳು—ಅಲ್ಲಿಗೆ ಬಂದರು. ಹೀಗೆ ಹಿಂದೂದೇಶದಿಂದ ಜವದ್ವೀಪಕ್ಕೆ ನೆಲಸಹೋದವರು ಅಲ್ಲಿಯ 'ಬೋರೋಬೂದೂರು' ಮತ್ತು 'ಪ್ರಂಬನಂ' ಎಂಬ ಸ್ಥಳಗಳಲ್ಲಿ ಕಟ್ಟಿದ ಮಹಾದೇವಾಲಯಗಳು ಈಗಲೂ ಸಮಸ್ತಜಗತ್ತನ್ನೇ ವಿಸ್ಮಯಗೊಳಿಸುತ್ತಿವೆ.

ಹುಯೆನ್‌ತ್ಸಾಂಗನಾದ ಮೇಲೆ ಬಂದ ಇತ್ಸಿಂಗನು ತನ್ನ ಸಂಚಾರ ಮಾರ್ಗದಲ್ಲಿ ಸುಮತ್ರಕ್ಕೂ ಹೋಗಿದ್ದನು; ಅಲ್ಲಿ ಕೆಲವು ವರುಷ ನಿಂತು ಸಂಸ್ಕೃತ ಪಾಲೀಭಾಷೆಗಳನ್ನು ಕಲಿತನು. ಆ ದ್ವೀಪದ ರಾಜಧಾನಿಯಲ್ಲಿ ಸಾವಿರ ಮಂದಿ ಭಿಕ್ಷುಗಳಿದ್ದರು. ಹಿಂದೂದೇಶದಲ್ಲಿ ಕಲಿಯಬಹುದಾಗಿದ್ದ ವಿಷಯಗಳನ್ನೆಲ್ಲ ಅಲ್ಲಿ ಕಲಿಸುತ್ತಿದ್ದರು. ಸುಮತ್ರದಲ್ಲಿ ಮೊದಲು ಬ್ರಾಹ್ಮಣಧರ್ಮವಿದ್ದು ಅನಂತರ ಬೌದ್ಧಧರ್ಮವು ಪ್ರವರ್ಧಮಾನಕ್ಕೆ ಬಂತೆಂದೂ; ದಕ್ಷಿಣ ಸಮುದ್ರದಲ್ಲಿ ಹರಡಿರುವ ಹನ್ನೊಂದು ದ್ವೀಪಗಳ ದೊರೆಗಳೂ ಅಧಿಕಾರಿಗಳೂ ಬೌದ್ಧಧರ್ಮವನ್ನು ಮೆಚ್ಚಿ, ಅದನ್ನು ಒಪ್ಪಿ, ಅದಕ್ಕೆ ವಶವರ್ತಿಗಳಾಗಿದ್ದರೆಂದೂ ಅದೇ ಇತ್ಸಿಂಗನು ತಿಳಿಸಿದ್ದಾನೆ.

ಇದೇ ರೀತಿಯಲ್ಲಿ, ಹರ್ಷನ ಕಾಲದ ಹಿಂದೂದೇಶದ ಸಂಸ್ಕೃತಿಯು ಜನ್ಮಭೂಮಿಯ ಎಲ್ಲೆಕಟ್ಟುಗಳನ್ನು ದಾಟಿ, ದಕ್ಷಿಣ ಸಮುದ್ರದ ದ್ವೀಪ

ಗಳಲ್ಲಿ ಹರಡಿಕೊಂಡ ರೀತಿಯಲ್ಲಿ, ಗಡಿನಾಡುಗಳಿಂದ ಆಚೆಗೂ ಅದು ಪಸರಿಸಿತ್ತೆಂಬುದಕ್ಕೆ ಹುಯೆನ್‌ತ್ಸಾಂಗನೆ ಸಾಕ್ಷಿ. ಆತನು ಹಿಂದೂದೇಶವನ್ನು ಬಿಟ್ಟು ಭೂಮಾರ್ಗವಾಗಿ ಚೀನಕ್ಕೆ ಹೋದನಷ್ಟೆ. ಆ ಮಾರ್ಗದಲ್ಲಿ, ಕೆಲವು ಸ್ಥಳಗಳಲ್ಲಿ ಹಿಂದೂದೇಶದಲ್ಲಿ ಕಲಿಯಬಹುದಾದ ವಿದ್ಯೆಗಳನ್ನು ಕಲಿಸುತ್ತಿದ್ದರು; ಅವರ ವರ್ಣಮಾಲೆ ಕೂಡ ಹಿಂದೂದೇಶದ ವರ್ಣಮಾಲೆಯನ್ನೇ ಆಶ್ರಯಿಸಿತ್ತು. ಕುಛಿದೇಶದಲ್ಲಿ, ಹರ್ಷನ ಮೇಲು ಪಂಗ್ತಿಯನ್ನು ಅನುಸರಿಸಿ ಪಂಚ ವಾರ್ಷಿಕ ಪರಿಷತ್ತನ್ನು ನಡಸುತ್ತಿದ್ದರು. ಅದೇ ಸಮಯದಲ್ಲಿ ಪ್ರತಿವರುಷವೂ ನಡಸುವ ಧರ್ಮಸಭೆಯೂ ನೇರುತ್ತಿತ್ತು. ಆ ಸಭೆ ಹತ್ತಾರು ದಿವಸ ನಡೆಯುತ್ತಿತ್ತು; ದೇಶದ ನಾನಾಭಾಗಗಳಿಂದ ಭಿಕ್ಷುಗಳು ಬಂದು ನೆರೆಯುತ್ತಿದ್ದರು. ಆ ಸಭೆ ಮೊದಲಾಗಿ ಮುಗಿಯುವವರೆಗೆ ದೊರೆಯೂ ಪ್ರಜೆಗಳೂ ಉಪವಾಸ ಮಾಡುತ್ತ, ಬೇರೆ ಯಾವ ಕೆಲಸಕ್ಕೂ ಮನಸ್ಸುಕೊಡದೆ, ಧರ್ಮಕಥನವನ್ನು ಕೇಳುತ್ತಿದ್ದರು. ಆ ಕಾಲದಲ್ಲಿ ಬುದ್ಧನ ಪ್ರತಿಮೆಗಳಿಗೆ ಉತ್ಸವ ನಡೆಯುತ್ತಿತ್ತು. ಆ ದೇಶದ 'ಆಶ್ಚರ್ಯ ವಿಹಾರ'ವೆಂಬ ಪ್ರಖ್ಯಾತವಾದ ವಿಹಾರದಲ್ಲಿ ವಿಶಾಲವಾದ ಸಭಾಸ್ಥಾನಗಳಿದ್ದುವು. ಅಲ್ಲಿ ಅನೇಕ ಬುದ್ಧನ ಪ್ರತಿಮೆಗಳಿದ್ದುವು. ದೂರದೇಶಗಳಿಂದ ಬಂದ ಪ್ರಸಿದ್ಧ ಪುರುಷರು ಅಲ್ಲಿ ಇಳಿದುಕೊಂಡು, ದೊರೆಯೂ ಪ್ರಜೆಗಳೂ ನೀಡುತ್ತಿದ್ದ ಆತಿಥ್ಯವನ್ನು ಸ್ವೀಕರಿಸುತ್ತಿದ್ದರು. ಹೀಗೆ ಹಿಂದೂದೇಶವನ್ನು ದಾಟಿ ದೂರ ಹೋದ ಮೇಲೂ, ಅನೇಕ ಬೌದ್ಧರ ವಿಹಾರಗಳನ್ನೂ ಬುದ್ಧನ ಪ್ರತಿಮೆಗಳನ್ನೂ ಸ್ತೂಪಗಳನ್ನೂ ಹುಯೆನ್‌ತ್ಸಾಂಗನು ಕಂಡನು. ಅಲ್ಲದೆ, ಆ ಕಾಲದಲ್ಲಿ ಹಿಂದೂದೇಶದ ಚಕ್ರವರ್ತಿಯಾದ ಹರ್ಷನ ಧರ್ಮಾಚರಣೆಯನ್ನು ಕೆಲವು ಕಡೆ ಅನುಕರಿಸುತ್ತಿದ್ದುದೂ, ಅನೇಕ ವಿಹಾರಗಳಲ್ಲಿ ಪ್ರಖ್ಯಾತರಾದ ಆಚಾರ್ಯರಾಗಿ ಹಿಂದೂದೇಶದ ಪಂಡಿತರೇ ಇದ್ದುದೂ ಆತನ ದೃಷ್ಟಿಗೆ ಬೀಳದೆ ಇರಲಿಲ್ಲ.

ಇವುಗಳ ಜೊತೆಗೆ, ಭಾರತೀಯ ಸಂಸ್ಕೃತಿಯು ತನ್ನ ಪ್ರಭೆಯನ್ನು ಚೀನಾದೇಶದವರೆಗೂ ಹರಡಿ ಅಲ್ಲಿಯ ವಿದ್ವಾಂಸರನ್ನು ಆಕರ್ಷಿಸುತ್ತಿದ್ದ ವಿಷಯವು ಹಿಂದೆಯೇ ಹೇಳಿರುವುದರಿಂದ ಅದನ್ನು ಪುನಃ ಒತ್ತಿ ಹೇಳ

ಬೇಕಾಗಿಲ್ಲ. ಇಷ್ಟು ಮಾತ್ರವಲ್ಲದೆ, ಸಿರಿಯಾದೇಶದಿಂದ ಕೆಲವರು ಕ್ರೈಸ್ತರು ಕೂಡ ಹರ್ಷನ ಆಸ್ಥಾನಕ್ಕೆ ಬಂದಿದ್ದರೆಂದು ವಿದ್ವಾಂಸರು ಕೆಲವರು ಅಭಿಪ್ರಾಯಪಡುತ್ತಾರೆ.

---

# ಹರ್ಷನ ಗುಣಗಾನ

ಇದುವರೆಗೆ ಹರ್ಷನ ದಿವ್ಯಚರಿತೆಯನ್ನು ಅನುಸರಿಸಿ ತಿಳಿದು ಬಂದವರಿಗೆ ಆತನ ಗುಣಗಾನವನ್ನೇನೂ ಪುನಃ ಹೇಳಬೇಕಾಗಿಲ್ಲವಾದರೂ, ಆತನೊಡನೆ ಇದ್ದು ಓಡಿಯಾಡಿ, ಅವನನ್ನು ಅಂಗೈಯ ನೆಲ್ಲಿಯಕಾಯಂತೆ ಬಲ್ಲವರು—ಹರ್ಷನ ಕಾಲದ ಹಿರಿಯರು—ಅವನನ್ನು ಕುರಿತು ಏನು ಅಭಿಪ್ರಾಯಪಡುವರೆಂದು ನೋಡೋಣ.

*   *   *   *

ಇದು ಶ್ರೀ ಹರ್ಷನ ತಮ್ಮನಾದ ಕೃಷ್ಣನೆಂಬವನ ಕೀರ್ತನೆ:

"ನಮ್ಮ ಅಮೃತಸಮನಾದ ಸ್ವಾಮಿಯು ಇತರ ದೊರೆಗಳಂತಲ್ಲ. ಅವನಿಗೆ ಗರ್ವವಿಲ್ಲ. ಅವನು ತನ್ನ ಸ್ಥೈರ್ಯವನ್ನು ಎಂದೂ ಮರೆಯುವುದಿಲ್ಲ. ಅವನಿಗೆ ದರ್ಪವಿಲ್ಲ. ಅವನು ಅಭಿಮಾನದಿಂದ ಬೀಗಿ ನಡೆಯುವುದಿಲ್ಲ. ಅವನಾಡುವ ಮಾತು ಮದದಿಂದ ನಿಷ್ಠುರವಾದುದಲ್ಲ. ಅವನ ಬುದ್ಧಿಗೆ ಸಾಧುಗಳೇ ರತ್ನಗಳು. ಅವನಿಗೆ ಮುತ್ತಿನಂತಹ ಗುಣಗಳ ಮೇಲೆ ಬಹು ಪ್ರೀತಿ. ತಕ್ಕುದನ್ನು ಅವನು ಎಷ್ಟು ಶ್ರದ್ಧೆಯಿಂದ ಮಾಡುವನೆಂಬುದಕ್ಕೆ ಅವನು ಆಚರಿಸುವ ದಾನಗಳೇ ಸಾಕ್ಷಿ. ಸರ್ವಾಗ್ರೇಸರವಾದ ಯಶಸ್ಸಿನ ಮೇಲೆ ಅವನಿಗೆ ಮಹಾ ಪ್ರೀತಿ. ತನಗೆ ಕಪ್ಪ ಕೊಡುವ ಭೂಭಾಗಕ್ಕೆ ಅವನು ಅಲಂಕಾರಪ್ರಾಯನು.

"ಹರ್ಷನಿಂದ ಅವನ ಮಿತ್ರರಿಗೆ ಉಪಕಾರವಾಗುತ್ತಿತ್ತು. ಅವನ ಪ್ರಭುತ್ವದಿಂದ ಭೃತ್ಯರಿಗೆ ಉಪಕಾರವಾಗುತ್ತಿತ್ತು. ಅವನ ವಿದಗ್ಧತಾ ಗುಣದಿಂದ ಪಂಡಿತರಿಗೆ ಉಪಕಾರವಾಗುತ್ತಿತ್ತು. ಅವನ ಬಾಂಧವರಿಗೆ ಅವನ ವಿಜಯದಿಂದ ಉಪಕಾರವಾಗುತ್ತಿತ್ತು. ಅವನ ಐಶ್ವರ್ಯದಿಂದ ಬೇಡಿದವರಿಗೆ ಸಹಾಯವಾಗುತ್ತಿತ್ತು. ಅವನ ಸರ್ವಸ್ವವೂ ಬ್ರಾಹ್ಮಣರ

ಉಪಕಾರಕ್ಕಾಗಿಯೇ ಇತ್ತು. ಮಾಡಿದ ಸುಕೃತಗಳನ್ನು ಸ್ಮರಿಸುವುದಕ್ಕಾಗಿ ಅವನ ಹೃದಯವೂ, ಧರ್ಮಕ್ಕೆ ನೆರವಾಗುವುದಕ್ಕಾಗಿ ಅವನ ಆಯುಸ್ಸೂ, ಸಾಹಸಕಾರ್ಯಗಳನ್ನು ಮಾಡುವುದಕ್ಕಾಗಿ ಅವನ ಶರೀರವೂ, ಅವನ ಕತ್ತಿಯ ಏಟನ್ನು ತಾಳುವುದಕ್ಕಾಗಿ ಪೃಥ್ವಿಯೂ, ಅವನ ವಿನೋದಕ್ಕಾಗಿ ಇತರ ರಾಜರೂ, ಅವನ ಪ್ರತಾಪಕ್ಕಾಗಿ ಶತ್ರುಗಳ ಸಮೂಹವೂ ಮೀಸಲಾಗಿತ್ತು.

"ಆತನ ಪಾದಪಲ್ಲವಗಳ ನೆರಳಿನಲ್ಲಿ ಸರ್ವಾತಿಶಯವಾದ ಸುಖರಸವು ಪ್ರವಹಿಸುತ್ತಿತ್ತು."

* * * *

ಇದು ಬಾಣನ ಗುಣಗಾನ:

"ಧನರಾಶಿಯು 'ನಮ್ಮನ್ನು ಕಂಡರೆ ಹರ್ಷನಿಗೆ ಸ್ನೇಹವಿಲ್ಲ' ಎನ್ನುತ್ತಿತ್ತು; ಅವನು ಅಷ್ಟು ದಾನ ಮಾಡುತ್ತಿದ್ದನು. ದೋಷಗಳು 'ಇವನು ನಮಗೆ ಆಶ್ರಯ ಕೊಡುವುದಿಲ್ಲ' ಎನ್ನುತ್ತಿದ್ದುವು; ಅವನು ಅಷ್ಟು ಪರಿಶುದ್ಧನಾಗಿದ್ದನು. ಅವನ ನಿಗ್ರಹಶಕ್ತಿಗೆ ಇಂದ್ರಿಯಗಳು ಬೆರಗಾಗಿದ್ದುವು. ಕಲಿಯು 'ನಾನು ಇವನನ್ನು ಮುಟ್ಟಲಾರೆ'ನೆನ್ನುತ್ತಿದ್ದನು; ಅವನು ಅಷ್ಟು ಋಜುವಾಗಿದ್ದನು. ಸಮಸ್ತ ವ್ಯಸನಗಳು ಅವನನ್ನು ನೀರಸನೆಂದೂ, ಅಪಕೀರ್ತಿಯು ಅವನನ್ನು ಅಂಜುಬುರುಕನೆಂದೂ ಕರೆಯುತ್ತಿದ್ದುವು. 'ಇವನ ಮನಸ್ಸಿನ ವ್ಯಾಪಾರಗಳು ತಿಳಿಯಲು ಕಷ್ಟ'ಎಂದು ಕಾಮನು ಹೇಳುತ್ತಿದ್ದನು. 'ರಾಜ್ಯಲಕ್ಷ್ಮಿಯಲ್ಲಿ ಇವನು ಅನುರಕ್ತನಾಗಿರುವನು' ಎಂದು ಸರಸ್ವತಿಯು ಗೊಣಗುತ್ತಿದ್ದಳು. ಪರಸ್ತ್ರೀಯರು ಅವನನ್ನು ನಪುಂಸಕನೆನ್ನುತ್ತಿದ್ದರು. ಯತಿಗಳು ಅವನನ್ನು ಶ್ರೇಷ್ಠನಾದ ಮುನಿಯೆನ್ನುತ್ತಿದ್ದರು. ವೇಶ್ಯೆಯರಿಗೆ ಅವನು ಧೂರ್ತನು. ಸ್ನೇಹಿತರು 'ಇವನನ್ನು ಬೇಕಾದಹಾಗೆ ತಿರುಗಿಸಬಹುದು' ಎನ್ನುತ್ತಿದ್ದರು. ವಿಪ್ರರಿಗೆ ಅವನು ಪರಿಚಾರಕನು. ಅವನಿಗೆ ಒಳ್ಳೆಯ ಸಹಾಯವಿದೆಯೆಂದು ಶತ್ರುಗಳು ಹೇಳುತ್ತಿದ್ದರು.

"ಹರ್ಷನನ್ನು ನೋಡಿದರೆ: ಕೃತಯುಗಕ್ಕೆ ಇವನೇ ಕಾರಣ; ದೇವತೆಗಳು ಸೃಷ್ಟಿಯಾಗಲು ಇವನೇ ಬೀಜ; ದರ್ಪಕ್ಕೆ ಇವನೇ ಉತ್ಪತ್ತಿ

ಸ್ಥಾನ; ಕರುಣೆಗೆ ತವರುಮನೆ ; ಇವನೇ ಪುರುಷೋತ್ತಮನ ಪಕ್ಕದ ಮನೆಯವನು ; ಪರಾಕ್ರಮಕ್ಕೆ ಗಣಿಯ ಬೆಟ್ಟ , ಸರಸ್ವತಿಯ ಸರ್ವವಿದ್ಯೆಗಳನ್ನೂ ಶೇಖರಿಸಿದ ಮನೆ ಇವನೇ ; ಇಂದು, ಲಕ್ಷ್ಮಿಯು ಹುಟ್ಟಲೆಂದು ನಡೆಸಿದ ಎರಡನೆಯ ಅಮೃತಮಥನ ದಿವಸ; ಈ ದಿನ ವೈದಗ್ಧ್ಯದ ಬಲಪ್ರದರ್ಶನ, ಸಕಲಸ್ಥಿತಿಗಳೂ ಬಂದು ಕೂಡುವ ಏಕಸ್ಥಾನ; ರಾಜ್ಯದ ಸಕಲ ದುಶ್ಚರಿತಗಳಿಗೂ ಇದು ಪ್ರಾಯಶ್ಚಿತ್ತ ; ಕಾಮನ ಎಲ್ಲಾ ಬಲವನ್ನೂ ಎದುರಿಸುವ ಶಕ್ತಿಯಿದು ; ಪುರಗಳನ್ನು ವಶಪಡಿಸಿಕೊಂಡ ಪುರಂದರನ ದರ್ಶನವಿದು ; ಧರ್ಮವು ಪ್ರತ್ಯಕ್ಷವಾಗಿ ಹಿಂದಿರುಗಿ ಬಂದಿದೆ ; ಕಲೆಗಳಿಗೆಲ್ಲ ಇದು ಕನ್ಯೆಯರ ಅಂತಃಪುರ ; ಇದು ಸೌಭಾಗ್ಯದ ಪರಮ ಪ್ರಮಾಣ—ಎನ್ನುವ ಹಾಗಿತ್ತು.

''ಇವನೇ ಹರ್ಷನು ! ಒಳ್ಳೆಯ ಜನ್ಮ ಪಡೆದವನು ; ಒಳ್ಳೆಯ ಹೆಸರು ತಾಳಿದವನು ; ತೇಜಸ್ಸಿನ ರಾಶಿಯು ; ನಾಲ್ಕು ಸಮುದ್ರಗಳ ನಡುವಣ ಭೂಮಿ ಇವನ ಕುಟುಂಬ ; ಬ್ರಹ್ಮಾಂಡದ ಫಲವನ್ನು ಅನುಭವಿಸುವವನು ; ಹಿಂದಿನ ದೊರೆಗಳೆಲ್ಲರ ಜಯಗಳನ್ನೂ ಮೀರಿಸಿದ ಪರಮೇಶ್ವರನು ಇವನೇ ! ಇವನಿಂದ ಭೂಮಿಯು ನಿಜವಾಗಿಯೂ ರಾಜನ್ವತಿಯಾದಳು. ಅಮರರನ್ನೂ ಮೀರಿಸಿದ ಇವನ ರಾಜತ್ವವು ಚಿತ್ರವಾದುದು; ಇವನ ದಾನಕ್ಕೆ ತಕ್ಕ ದೀನರು ಸಾಲದು ; ಪ್ರಜ್ಞೆಗೆ ಶಾಸ್ತ್ರಗಳು ಸಾಲವು ; ಕವಿತೆಗೆ ಮಾತೇ ಸಾಲವು ; ಸತ್ತ್ವಕ್ಕೆ ಸಾಹಸಸ್ಥಾನಗಳು ಸಾಲವು ; ಉತ್ಸಾಹಕ್ಕೆ ತಕ್ಕ ಕೆಲಸಗಳು ಸಾಲವು; ಕೀರ್ತಿಗೆ ದಿಕ್ಕುಗಳು ಸಾಲವು ; ಅನುರಾಗಕ್ಕೆ ಲೋಕಹೃದಯಗಳು ಸಾಲವು ; ಗುಣಗಳನ್ನು ಎಣಿಸಲು ಸಂಖ್ಯೆ ಸಾಲದು ; ಕೌಶಲ್ಯಕ್ಕೆ ಕಲೆಗಳು ಸಾಲವು.''

* * * *

ಇದು ಬಾಣನ ದಾಯಾದಿಯಾದ ಶ್ಯಾಮಲನ ಕೀರ್ತನೆ :

''ಚಂದ್ರನು ಗುರುಪತ್ನಿಯನ್ನು ಬಯಸಿದನು. ಪುರೂರವನು ಬ್ರಾಹ್ಮಣ ದ್ರವ್ಯಕ್ಕೆ ಆಶಿಸಿದನು. ನಹುಷನೂ ಯಯಾತಿಯೂ ಪರಪತ್ನಿಯಲ್ಲಿ ಕಣ್ಣಿಟ್ಟರು. ಸೋಮಕನು ಸ್ವಂತ ಮಗನನ್ನೇ ಕೊಂದನು.

ನಳನು ಜೂಜಾಡಿ ಕೆಟ್ಟನು. ಸಂವರಣನು ಮಿತ್ರನ ಮಗಳನ್ನು ಕೆಡಿಸಿದನು. ಕಾರ್ತವೀರ್ಯನು ಗೋಬ್ರಾಹ್ಮಣರನ್ನು ಪೀಡಿಸಿ ಹತನಾದನು. ಯುಧಿಷ್ಠಿರನು ರಣಭೂಮಿಯಲ್ಲಿ ಸುಳ್ಳಾಡಿದನು. ಇದರಂತೆಯೇ ಇನ್ನೂ ಅನೇಕರು ಹಿಂದಿನ ದೊರೆಗಳು ಒಂದೊಂದು ಕುಂದಿನಿಂದ ಕೆಟ್ಟರು. ಹೀಗೆ, ಸರ್ವದ್ವೀಪಗಳಿಗೂ ಸ್ವಾಮಿಯಾದ ಹರ್ಷನನ್ನು ಬಿಟ್ಟರೆ, ಕಲಂಕವಿಲ್ಲದ ಬೇರೆ ರಾಜತ್ವವೇ ಇಲ್ಲ. ಅವನನ್ನು ಕುರಿತು ಅನೇಕ ಆಶ್ಚರ್ಯಗಳನ್ನು ಕೇಳಿರುವೆವು :—ಆತನು ಚಲಿಸುತ್ತಿದ್ದ ಎದುರು ಪಕ್ಷದ ರಾಜರನ್ನು ನಿಶ್ಚಲರನ್ನಾಗಿ ಮಾಡಿರುವನು. ಆತನು ಇತರ ರಾಜರಲ್ಲೆಲ್ಲ ಕ್ಷಮೆಯನ್ನು ಪ್ರದರ್ಶಿಸುವನು. ಸಿಂಧುದೇಶಾಧಿಪನನ್ನು ಮರ್ದಿಸಿ, ಆ ಪುರುಷೋತ್ತಮನು ಕೀರ್ತಿಯನ್ನು ಸಂಪಾದಿಸಿರುವನು. ಶ್ರೀಕುಮಾರನೆಂಬ ರಾಜನನ್ನು ಹುಚ್ಚಾನೆಯ ಸೊಂಡಿಲಿನಿಂದ ಬಿಡಿಸಿ, ಆ ಬಲವಂತನು ದರ್ಪಶಾತವೆಂಬ ಆನೆಯನ್ನು ಬಂಧನದಿಂದ ತಪ್ಪಿಸಿರುವನು. ಆ ದೇವನು ತನ್ನ ಕುಮಾರನಿಗೆ ಅಭಿಷೇಕಮಾಡಿರುವನು. ಆ ಸ್ವಾಮಿಯು ಶತ್ರುಗಳನ್ನು ಒಂದೇ ಪ್ರಹಾರದಿಂದ ಕೆಡವಿ ತನ್ನ ಶಕ್ತಿಯನ್ನು ಪ್ರಖ್ಯಾತ ಪಡಿಸಿರುವನು. ಆ ನರಸಿಂಹನು ತನ್ನ ಸ್ವಹಸ್ತದಿಂದ ಶತ್ರುವನ್ನು ಉರುಳಿಸಿ, ತನ್ನ ವಿಕ್ರಮವನ್ನು ಪ್ರಕಟಗೊಳಿಸಿರುವನು. ಆ ಪರಮೇಶ್ವರನು ತುಷಾರಶೈಲದ ದುರ್ಗದಿಂದ ಕಪ್ಪವನ್ನು ಸುಲಿದಿರುವನು. ಆ ಲೋಕನಾಥನು ದಿಕ್ಕು ದಿಕ್ಕಿಗೂ ಲೋಕಪಾಲರನ್ನು ನಿಲ್ಲಿಸಿ, ಸಕಲ ಲೋಕದ ಕೋಶವನ್ನೂ ಬ್ರಾಹ್ಮಣರಿಗೆ ಹಂಚಿರುವನು. ಅವನು ಮಾಡಿರುವ ಇಂತಹ ಕಾರ್ಯಗಳಿಂದ ಕೃತಯುಗದ ನೆನಪಾಗುವುದು.”

* * * *

ಇದು ಸಿಂಹನಾದನು ಹರ್ಷನ ಎದುರಿಗೆ ನುಡಿದ ಪ್ರಶಂಸೆ :

“ ದೇವ ! ನೀನು ಸತ್ವವಂತರಲ್ಲಿ ಅಗ್ರಣಿ, ಪ್ರಜ್ಞಾವಂತರ ನಾಯಕ, ಸಮರ್ಥರಲ್ಲಿ ಪ್ರಥಮ, ಅಭಿಜಾತರಲ್ಲಿ ಮುಖ್ಯ, ತೇಜಸ್ವಿಗಳಲ್ಲ ಅಗ್ರೇಸರ, ಸಹಿಷ್ಣುಗಳಲ್ಲಿ ಮೊದಲನೆಯವನು. ”

ಪ್ರಭಾಕರವರ್ಧನನು “ ವತ್ಸ ! ನಿನ್ನ ಪಿತೃಪ್ರೇಮವನ್ನೂ ಮೃದು ಹೃದಯವನ್ನೂ ನಾನು ಬಲ್ಲೆನು ”ಎಂದಿದ್ದನು.

ಇದು ಸ್ಕಂದಗುಪ್ತನು ಹರ್ಷನ ಮುಖಕ್ಕೆ ನುಡಿದ ಮಾತು:

"ದೇವ! ನೀನು ಕೈಕೊಂಡಿರುವ ಈ ಉದ್ಯೋಗವು ಪುಷ್ಪಭೂತಿ ವಂಶದಲ್ಲಿ ಹುಟ್ಟಿಬಂದ ನಿನ್ನ ಆಭಿಜಾತ್ಯಕ್ಕೂ, ನಿನ್ನ ಸಹಜವಾದ ತೇಜಸ್ಸಿಗೂ, ದಿಕ್ಕರಿಕರದಂತೆ ಉದ್ದವಾದ ನಿನ್ನ ಬಾಹುಗಳಿಗೂ, ಅಸಾಧಾರಣವಾದ ನಿನ್ನ ಸೋದರಸ್ನೇಹಕ್ಕೂ ಯೋಗ್ಯವಾದುದು."

*　　*　　*　　*

ಇಂತಹ ಚಕ್ರವರ್ತಿಯನ್ನು ಕಂಡು, "ಸಾರಭೂತವಾದ ಈ ಸಂಸಾರವನ್ನು ಈಗ ನಿಂದಿಸಲಾಗದು; ವಂದಿಸಬೇಕು. ಇಂತಹ ರೂಪವು ಅಚಿಂತಿತವಾಗಿ ಕಣ್ಣೆದುರಿಗೆ ಬರುವಾಗ, ಜೀವಿಗಳು ಯಾವ ಅದ್ಭುತವನ್ನು ತಾನೆ ಕಾಣಲಾರರು? ಇಂತಹ ಹೃದಯೋತ್ಸವದಿಂದ, ನಮ್ಮ ಜನ್ಮಾಂತರಗಳ ಸುಕೃತಗಳು ಏನಿರಬೇಕೆಂದು ಊಹಿಸಬಹುದು. ದರ್ಶನಕ್ಕೆ ಸುಲಭವಾಗಿ ಸಿಕ್ಕದ, ದೇವತೆಗಳಿಗೆ ಪ್ರಿಯನಾದ, ಇಂತಹವನನ್ನು ಕಂಡುದರಿಂದ, ನಮ್ಮ ತಪಸ್ಸಿಗೆ ಇಲ್ಲಿಯೇ ಫಲ ದೊರೆತಂತಾಯ್ತು. ನಮ್ಮ ಕಣ್ಣುಗಳಿಗೆ ಅಮೃತದಿಂದ ತೃಪ್ತಿಯಾಯ್ತು; ನಿರ್ವೃತ್ತಿಸುಖ ಕೂಡ ನಮ್ಮ ಮನಸ್ಸಿಗೆ ಬೇಕಾಗಿಲ್ಲ; ಇಂತಹ ಸಜ್ಜನನನ್ನು ಕಂಡುದು ನಮ್ಮ ಮಹಾ ಪುಣ್ಯವಲ್ಲದೆ ಬೇರೆಯಲ್ಲ. ನೀನು ಹುಟ್ಟಿದ ದಿನ ಸುದಿನ! ಸಕಲ ಜೀವಜಂತುಗಳಿಗೆ ಜೀವ ಕೊಡುವ ನಿನ್ನನ್ನು ಹೆತ್ತ ಜನನಿಯು ಪುಣ್ಯವಂತೆ! ನೀನು ಪುಣ್ಯಗಳ ಪರಿಣಾಮ! ನಿನ್ನ ಸರ್ವ ಅವಯವಗಳ ಪರಮಾಣುಗಳು ಪುಣ್ಯಮಾಡಿದ್ದುವು! ನಿನ್ನನ್ನು ಆಶ್ರಯಿಸಿರುವ ಸೌಭಾಗ್ಯದ ಭಾಗ್ಯವೇ ಭಾಗ್ಯ! ನಿನ್ನಲ್ಲಿ ನೆಲಸಿರುವ ಪುರುಷಭಾವವೂ ಪುಣ್ಯಮಾಡಿತ್ತು! ಮುಮುಕ್ಷುವಾಗಬೇಕೆಂದಿದ್ದ ನನಗೆ ನಿನ್ನನ್ನು ಕಂಡು, ನಿಜವಾಗಿಯೂ ಮನುಜಜನ್ಮದಲ್ಲಿ ಶ್ರದ್ಧೆ ಹುಟ್ಟಿದೆ; ನಾನು ಬಯಸದೆಯೇ ಕಾಮನನ್ನು ಕಂಡಿರುವೆನು. ವನದೇವತೆಗಳ ಕಣ್ಣುಗಳು ಕೃತಾರ್ಥವಾದುವು; ನೀನು ಗೋಚರವಾಗಿ, ಈ ಕಾಡಿನ ಮರಗಳ ಜನ್ಮ ಸಫಲವಾಯಿತು. ನಿನ್ನ ಮಾತು ಅಮೃತಮಯ, ಕಾರ್ಯವಂತೂ ಮಧುರ. ಇಷ್ಟು ಶೈಶವದಲ್ಲಿ, ನಿನಗೆ ಇಂತಹ ವಿನಯವನ್ನು ಹೇಳಿಕೊಟ್ಟ ಉಪಾಧ್ಯಾಯನಾರೆಂದು ನಾನು ತಿಳಿಯಲಾರೆ. ನೀನು ಜನಿಸುವ

ವರೆಗೆ ಗುಣಗಳ ಗುಂಪು ಶೂನ್ಯವಾಗಿತ್ತು. ನಿನ್ನಂತಹ ಮುಕ್ತಾಮಣಿ ಸದೃಶನಾದವನು ಹುಟ್ಟಿದ ವಂಶವ ದೊರೆಯು ಧನ್ಯನು" ಎಂದು ದಿವಾಕರ ಮಿತ್ರನಂತೆ ನಾವೂ ಕೀರ್ತಿಸುವುದಾದರೆ, ಆಗ ನಾವೂ ಧನ್ಯರು; ಆದು ನಮ್ಮ ಭಾಗ್ಯವಿಶೇಷ.



ಬಿ. ಬಿ. ಡಿ. ಪವರ್ ಪ್ರೆಸ್, ಅರಳೇಪೇಟೆ, ಬೆಂಗಳೂರು ಸಿಟಿ.

## ಜಿ. ಪಿ. ರಾಜರತ್ನಂ
ಅವರ
ಪುಸ್ತಕಗಳು

---

### 'ಶಿಶುಸಾಹಿತ್ಯ'

ತುತ್ತೂರಿ ಕಡಲೆಪುರಿ ಚುಟಕ
ಕೆನೆಹಾಲು ಕಲ್ಲುಸಕ್ಕರೆ
ಗುಲಗಂಜಿ

---

### 'ಬಾಲಸಾಹಿತ್ಯ'

ಗೌತಮ ಬುದ್ಧ ಶ್ರೀ ಹರ್ಷ ಅಶೋಕ ಮೌರ್ಯ
ಶ್ರೀ ರಾಮಚಂದ್ರ

---

### ಇತರ ಪುಸ್ತಕಗಳು

ರತ್ನನ ಪದಗಳು ಗಂಡುಗೊಡಲಿ ಬೆಳುದಿಂಗಳು
ರತ್ನನ ದೋಸ್ತಿ ರತ್ನ
ಶಾಂತಿ ಹನಿಗಳು

---

### ಬೌದ್ಧ ಗ್ರಂಥಗಳು

ಚೀನಾದೇಶದ ಬೌದ್ಧಯಾತ್ರಿಕರು
ಧರ್ಮದಾನಿ ಬುದ್ಧ ಮೂರು ಬೌದ್ಧರ ಸೂತ್ರಗಳು

---